# ಹೊಸತು

ತಿಂಗಳ ಪತ್ರಿಕೆ ಜನವರಿ 1995



- ಅಭಿವೃದ್ಧಿ ! ಯಾರಿಗಾಗಿ ?
- ದಶಕ ತುಂಬಿದಾಗ...
- ಸ್ವಾಯತ್ತ ಸ್ತ್ರೀ ಸಂಘಟನೆಗಳು

# ಮಾನಸ
ತಿಂಗಳ ಪತ್ರಿಕೆ

ಸಂಪುಟ : 11 ಸಂಚಿಕೆ : 1

ಜನವರಿ - 1995

**ಸಂಪಾದಕೀಯ ಮಂಡಳಿ :**

ರಾಜೇಶ್ವರಿ ಎಚ್. ಎಸ್.,
ಚಂಪಾವತಿ ಎಚ್. ಎಸ್., ಸರಸ್ವತಿ ದು.,
ಸವಿತ ಎ., ಗಾಯತ್ರಿ ವಿ.

**ಸಲಹೆ-ಸಹಕಾರ**

ಇಳಾ ವಿಜಯಾ

ವಿಳಾಸ :

**"ಮಾನಸ"** ತಿಂಗಳ ಪತ್ರಿಕೆ
ಪಂಚಾಯಿತಿ ರಸ್ತೆ
ಕಾಡುಗೋಡಿ ಪೋಸ್ಟ್
ಬೆಂಗಳೂರು - 560 067

**ಸಂಪರ್ಕ ವಿಳಾಸ**

ನಂ. 457, 12ನೇ ಅಡ್ಡರಸ್ತೆ,
ಪಶ್ಚಿಮ ಕಾರ್ಡ್‌ರಸ್ತೆ, 2ನೇ ಹಂತ
ಮಹಾಲಕ್ಷ್ಮಿಪುರ, ಬೆಂಗಳೂರು–560 086

ಸೂಚನೆ : ಬಿಡಿ ಪ್ರತಿ : **3-00 ರೂ.**
ವಾರ್ಷಿಕ ಚಂದಾ : **25 ರೂ.**
ಆಜೀವ ಚಂದಾ : **300 ರೂ.**

ಒಂದು ವಿಶೇಷ ಸಂಚಿಕೆಯೊಂದಿಗೆ
ಒಟ್ಟು ಹನ್ನೊಂದು ಸಂಚಿಕೆಗಳು

**ಈ ಸಂಚಿಕೆಯಲ್ಲಿ...**



ಸಂಪಾದಕರು, ಪ್ರಕಾಶಕರು ಹಾಗೂ ಮುದ್ರಕರು : ಮಾನವಿ ಮುದ್ರಣಾಲಯ
ಪಂಚಾಯಿತಿ ರಸ್ತೆ, ಕಾಡುಗೋಡಿ ಅಂಚೆ, ಬೆಂಗಳೂರು - ೫೬೦ ೦೬೭



# ಸಂಪಾದಕೀಯ

ಮಹಿಳೆಯರ ಸಶಕ್ತತೆ, ಸಂಘಟನೆಗಳೆಂಬ ಘೋಷಣೆಗಳೊಂದಿಗೆ ಪ್ರಾರಂಭವಾದ್ದ ಮಹಿಳಾ ಅಭಿವೃದ್ಧಿ ಕಾರ್ಯಕ್ರಮ ಇಂದು ಸರ್ಕಾರದ ಜನಸಂಖ್ಯಾ ನಿಯಂತ್ರಣ ಕಾರ್ಯಕ್ರಮಗಳಿಗೆ ಬೆಂಬಲ ನೀಡಲು, ತಾಂತ್ರೀಕೃತ ಕೃಷಿ ವಿಧಾನಗಳನ್ನು ಪ್ರವರ್ತಿಸಲು ತನ್ನ ಕಾರ್ಯಶೀಲತೆಯನ್ನು ಮೀಸಲುಗೊಳಿಸುತ್ತಿದೆ. ಬಹುತೇಕವಾಗಿ ಡಚ್ ಸರ್ಕಾರದ ಹಣದ ನೆರವಿನಿಂದಲ್ಲೇ ನಡೆಯುವ ಈ ಕಾರ್ಯಕ್ರಮ ದಾಖಲೆಗಳಲ್ಲಿ ಇಂದಿಗೂ ಸಶಕ್ತತೆಯ ಕಾರ್ಯಕ್ರಮವೇ!

ಇದು ಹೀಗೆಯೇ. ಇಂದು ಭಾರತದಂತ ಬಡ ರಾಷ್ಟ್ರದ ಅಭಿವೃದ್ಧಿಗೆಂದು—ಬಡತನ ನಿವಾರಣೆ, ಜನಸಂಖ್ಯಾ ನಿಯಂತ್ರಣ, ಪರಿಸರ ಕಾಪಾಡುವಿಕೆ, ಸುಧಾರಿತ ಕೃಷಿ ಹೀಗೆ ಹತ್ತು ಹಲವಾರು ಕಾರ್ಯಕ್ರಮಗಳಿಗೆ ಹಣ ಪೂರೈಸಲು ವಿವಿಧ ಶ್ರೀಮಂತ ದೇಶಗಳ ಸರ್ಕಾರಗಳು, ದತ್ತಿ ಸಂಸ್ಥೆಗಳು ನಾಮುಂದು ತಾಮುಂದೆಂಬ ಪೈಪೋಟಿಯಲ್ಲಿವೆ. ತಮ್ಮ ಕಾರ್ಯಕ್ರಮಗಳನ್ನು ಕೇವಲ ಕಲ್ಯಾಣ ಕಾರ್ಯಕ್ರಮಗಳಾಗಿಸದೆ ಜನರ ಭಾಗವಹಿಕೆ, ಅರಿವಿನ ಜಾಗೃತಿ, ಸಶಕ್ತತೆ ಮುಂತಾದ ಜನಪರ ಕಲ್ಪನೆಗಳ ಮುಸುಕಿನಡಿಯಲ್ಲೇ ಕಾರ್ಯಶೀಲಗೊಳ್ಳುವುದು ಇವುಗಳ ಯಾವತ್ತೂ ತಂತ್ರೋಪಾಯವಾಗಿರುತ್ತದೆ.

ಅತ್ಯಾಧುನೀಕೃತ ಅಭಿವೃದ್ಧಿಯ ಪ್ರಕ್ರಿಯೆಯಲ್ಲಿ ಪಾರಿಸಾರಿಕವಾಗಿ ದಿವಾಳಿಯೆದ್ದು ಹೋಗಿರುವ, ಬಂಡವಾಳ ವ್ಯವಸ್ಥೆಯ ತೀವ್ರ ಬಿಕ್ಕಟ್ಟನ್ನನುಭವಿಸುತ್ತಿರುವ ಶ್ರೀಮಂತ ದೇಶಗಳು ತಮ್ಮೆಲ್ಲಾ ಬಿಕ್ಕಟ್ಟುಗಳನ್ನು ಭಾರತದಂತಾ ಇನ್ನೂ ದೇಶೀಯ ನೆಲೆಗಳ ಸಂಪೂರ್ಣ ನಾಶ ಹೊಂದಿರದ ದೇಶಗಳಿಗೆ ವರ್ಗಾಯಿಸಿ ಬಿಡಲು ಹವಣಿಸುತ್ತವೆ. ಹೀಗಾಗಿ ಇಂತಹ ದೇಶಗಳು ಹೊತ್ತು ತರುವ ಪರಿಸರ ಸಂರಕ್ಷಣೆ, ಮಹಿಳಾ ಅಭಿವೃದ್ಧಿಗಳಂತಹ ಕಾರ್ಯಕ್ರಮಗಳಲ್ಲಿ ಸ್ಥಳೀಯ ಸಮಸ್ಯೆಗಳ ಗ್ರಹಿಕೆಯ ಲವಲೇಶವೂ ಇರುವುದಿಲ್ಲ ಅಲ್ಲದೆ ಸಹಾಯಾರ್ಥಿ ದೇಶಗಳ ಒಳಿತಿಗೆ ನಿರಂತರ ಸಂಪನ್ಮೂಲ ಹರಿಯುವಿಕೆ ಮತ್ತು ಅವುಗಳು ಸೃಷ್ಟಿಸಿದ ವಿಚ್ಛಿದ್ರಕಾರಕ ತಾಂತ್ರಿಕ ವಿಧಾನಗಳಿಗೆ ಮಾರುಕಟ್ಟೆಗಳು ಇಲ್ಲಿ ಖಚಿತಗೊಳ್ಳುತ್ತವೆ. ಈ ಎಲ್ಲಾ ಕಾರ್ಯಯೋಜನೆಗಳಿಗೆ 'ಜನಪರ'ವಾಗಿ ಧ್ವನಿಸುವ ಕೆಲ ಘೋಷಣೆಗಳೇ ತಕ್ಷಣದ ಆಕರ್ಷಣೆ. ಎಲ್ಲ ಬಯಲಾಗಿ ಸೂಕ್ತ ಪ್ರತಿಭಟನೆ ಮೂಡಿಬರುವ ವೇಳೆಗೆ ಇವು ತಮ್ಮ ಕಾರ್ಯಾಚರಣೆಗೆ ಬೇರೊಂದು ದೇಶವನ್ನು, ಸೂಕ್ತ ವೇದಿಕೆಯನ್ನು ಆಗಲೇ ಸೃಷ್ಟಿಸಿಕೊಂಡಿರುತ್ತವೆ. ICDSನ ಕೆಲ ಕಾರ್ಯಕ್ರಮಕ್ಕೆ ಹಣ ಪೂರೈಸುತ್ತಿದ್ದ ಹಲವು ಅಂಗಗಳು ತಮ್ಮ ಬೆಂಬಲವನ್ನು ಹಿಂತೆಗೆದುಕೊಂಡು ಆಫ್ರಿಕನ್ ದೇಶವೊಂದರಲ್ಲಿ ತೊಡಗಿಸಲು ತೀರ್ಮಾನಿಸಿವೆಯೆನ್ನುವುದು ಈಗ ಸುದ್ದಿ.

'ಮಹಿಳಾ ಅಭಿವೃದ್ಧಿ'ಯೆನ್ನುವುದು ಪ್ರಬಲ ಶಕ್ತಿಗಳ ಇಂತಹ ಯದ್ವಾತದ್ವ ತಿರುಚುವಿಕೆಗೆ ಒಳಗಾಗುತ್ತಿರುವ ಇಂದಿನ ಸಂದರ್ಭದಲ್ಲಿ ಮಹಿಳಾ ಚಳವಳಿಯ ಮುಂದಿರುವ ಸವಾಲು ತುಂಬಾ ಸಂಕೀರ್ಣವಾದುದು.

# ಅಭಿವೃದ್ಧಿ ! ಯಾರಿಗಾಗಿ ?

## ಮಹಿಳಾ ಅಭಿವೃದ್ಧಿ ಕಾರ್ಯಕ್ರಮಗಳ ಟೀಕಾತ್ಮಕ ವಿಶ್ಲೇಷಣೆ.

---

ಎರಡು ದಶಕಗಳ ನಿರಂತರ ನಡೆಯ ನಂತರ ಮಹಿಳಾ ಚಳವಳಿ ಈಗ ಕೊಂಚ ನಿಂತು ನೋಡಿದರೆ ಸರ್ಕಾರದಿಂದ ಹಿಡಿದು ಸಂಘ ಪರಿಹಾರದಂತಹ ಕೋಮುವಾದೀ ಶಕ್ತಿಯವರೆಗೆ ಎಲ್ಲೆಲ್ಲೂ ಮಹಿಳಾ ಚಳುವಳಿಯ ಪರಿಭಾಷಿಕಗಳೇ, ಸಂಕೇತಗಳೇ ಕಂಡು-ಕೇಳಿ ಬರುತ್ತಿರುವುದು ಮುಜುಗರ ಹುಟ್ಟಿಸುತ್ತದೆ. ಲಿಂಗ ಸಮಾನತೆ (gender equality) ಮತ್ತು ಮಹಿಳಾ ಸಶಕ್ತತೆ (Women's Empowerment) ಗಳೆನ್ನುವ ಕಲ್ಪನೆಗಳಂತೂ ಇಲ್ಲೆಲ್ಲಾ ಎಷ್ಟೊಂದು ಸರಾಗವಾಗಿ ಬಳಸಲ್ಪಡುತ್ತಿವೆಯೆಂದರೆ, ವ್ಯವಸ್ಥೆಗಳಲ್ಲಿ ರಾಚನಿಕ ಬದಲಾವಣೆಯ ರಾಜಕೀಯ ದ್ಯೇಯ ಹೊಂದಿದ ಮಹಿಳಾ ಚಳವಳಿ ತನ್ನೊಡಲಿನಿಂದ ಹೊಮ್ಮಿದ ಪರಿಕಲ್ಪನೆಗಳು ಯಾವತ್ತೂ ವ್ಯವಸ್ಥೆಯನ್ನು ಬಲಗೊಳಿಸುವಲ್ಲಿಯೇ ಸೂಕ್ಷ್ಮ ರೀತಿಯಲ್ಲಿ ಬಳಕೆಯಾಗುತ್ತಿರುವುದನ್ನು ಕಂಡು ಹೌಹಾರಿದೆ.

ಹೀಗೆ ಮಹಿಳಾ ಚಳವಳಿಯ ಪರಿಭಾಷೆಯನ್ನು, ಸಂಕೇತಗಳನ್ನು ಒಂದು ಕಡೆ ತನ್ನ ಕಾರ್ಯಕ್ರಮಗಳ ಯಶಸ್ವೀ ಅನುಷ್ಠಾನಕ್ಕಾಗಿಯೂ ಇನ್ನೊಂದು ಕಡೆಯಲ್ಲಿ ಚಳವಳಿಯನ್ನು ಬಗ್ಗು ಬಡಿಯಲಿಕ್ಕಾಗಿಯೂ ಉಪಯೋಗಿಸಿಕೊಂಡದ್ದು ರಾಜ್ಯ ವ್ಯವಸ್ಥೆ (State). ಸರ್ಕಾರ ಪ್ರತ್ಯೇಕವಾಗಿ ಮಹಿಳಾ ಅಭಿವೃದ್ಧಿ ಕಾರ್ಯಕ್ರಮವನ್ನು ಪ್ರಾರಂಭಿಸಿದಲಾಗಾಯ್ತು ಮಹಿಳೆಯ ಸಶಕ್ತತೆ ಎನ್ನುವ ಘೋಷಣೆಯೊಂದಿಗೇ ಅದು ಕಾರ್ಯಶೀಲಗೊಂಡಿದೆ. ತನ್ನ ಅನೇಕ ಮಿತಿಗಳಿಂದಾಗಿ ಮಹಿಳಾ ಚಳವಳಿ ಇನ್ನೂ ಗ್ರಾಮೀಣಕ್ಕೆಲ್ಲಾ ಪಸರಿಸಿದ ದೊಡ್ಡ ಮಟ್ಟದ ಸಮೂಹ ಚಳವಳಿಯಾಗಿ ಬೆಳೆಯದೆಯೇ ಇದ್ದಂತಹ ಸನ್ನಿವೇಶದಲ್ಲೇ ಸರ್ಕಾರ ತನ್ನ ಮಹಿಳಾ ಅಭಿವೃದ್ಧಿ ಕಾರ್ಯಕ್ರಮವನ್ನು ಗ್ರಾಮೀಣ ಮಟ್ಟದಲ್ಲಿ ಪ್ರಾರಂಭಿಸಿತು. ಗ್ರಾಮೀಣ ಬಡ ಮಹಿಳೆಯರು ತಮ್ಮ ಯಾವತ್ತೂ ಬವಣೆಗಳನ್ನು ಮುಕ್ತವಾಗಿ ಹೇಳಿಕೊಂಡು, ಸ್ವತಂತ್ರವಾಗಿ ಎದುರಿಸಿ ತನ್ಮೂಲಕ ಸಶಕ್ತತೆಯ ದಾರಿಗಳನ್ನು ಹುಡುಕಿಕೊಳ್ಳುವ, ಇಂತಹ ಹುಡುಕಿಕೊಳ್ಳುವ ಪ್ರಕ್ರಿಯೆಗಳಿಗೆ ಒತ್ತಾಸೆ ಮಾಡುವ ಸ್ವಯಂಸೇವಕಿಯರನ್ನು ಹೊಂದಿರುವ, ಒಟ್ಟಾರೆಯಲ್ಲಿ ಚಳವಳಿಯ ತದ್ರೂಪದಂತೆ ಕಾಣುವ ಸರ್ಕಾರೀ ಕಾರ್ಯಕ್ರಮವನ್ನು ಮಹಿಳಾ ಚಳವಳಿ ಕಣ್ಣುಜ್ಜಿಕೊಂಡು ನೋಡುವಂತಾಯಿತು.

ಸಮೂಹ ನೆಲೆಯಿರದ ಮಹಿಳಾ ಚಳವಳಿಯ ಮಿತಿಗಳಿಂದ ಬೇಸತ್ತಿದಂತಿದ್ದ ಕ್ರಿಯಾಶೀಲ, ಬದ್ಧ ಕಾರ್ಯಕರ್ತೆಯರು ಒಂದು ಕಡೆಯೂ, ಮಹಿಳಾ ಚಳವಳಿಯ ಪರಿಭಾಷೆಯನ್ನು ಕರಗತ ಮಾಡಿಕೊಂಡ ಸರ್ಕಾರದ ಏಜೆಂಟರುಗಳು ಇನ್ನೊಂದು ಕಡೆಯೂ ತೊಡಗಿಸಿಕೊಂಡ ವಿಲಕ್ಷಣ ಸಂಮಿಶ್ರ ಇಲ್ಲಿ ಉಂಟಾಯಿತು. ಅದೇನೇಯಾದರೂ ಚಳವಳಿಯ ಸಂಕೇತ, ಪರಿಭಾಷೆಗಳೆಲ್ಲವೂ ಪಿತೃಪ್ರಧಾನ ಸ್ವರೂಪೀ ರಾಜ್ಯ ವ್ಯವಸ್ಥೆಯ ಎಳೆಗಳನ್ನು ಗಟ್ಟಿಗೊಳಿಸುವ ಕಪಟ ರೂಪ ಹೊದ್ದುಕೊಂಡು ಬಂದ ಬಣ್ಣದ ಹೊದಿಕೆ ಎಂಬುದು ಬಯಲಾಗಲು ಬಹಳ ಸಮಯ ಹಿಡಿಯಲಿಲ್ಲ.

ಈ ಎಲ್ಲದರ ನಡುವೆ ಅತಿಯಾದ ನೋವುಂಡವರೆಂದರೆ ಹಳ್ಳಿ ಮಟ್ಟದಲ್ಲಿ ಕೆಲಸ ಮಾಡುವ ಸ್ವಯಂಸೇವಕಿಯರು. ದೊಡ್ಡ ಸಂಬಳ ಪಡೆಯುವ ಅಧಿಕಾರಿಣಿಯರ ಇಚ್ಛಾನುಸಾರವಾದ ರೂಲ್ಸ್‌ಗಳಿಗೆ ಒಳಗಾಗಿ ಅತ್ತ ನಿಜಕಾರ್ತೆಯರಾಗಿಯೂ ಉಳಿಯಲಾರದ, ಇತ್ತ ಪುಡಿಗಾಸಿನ ಗೌರವಧನ ಪಡೆಯುತ್ತಾ ಸರ್ಕಾರೀ ನೌಕರರಾಗಿಯೂ ಪರಿಗಣಿಸಲ್ಪಡದ ಎಡಬಿಡಂಗಿ ಸ್ಥಿತಿಯಲ್ಲಿ ದಿಕ್ಕುಕಾಣದಂತಾಗಿದ್ದಾರೆ. ಹಳ್ಳಿಗಳಲ್ಲಿ ಮಹಿಳೆಯರ ಸಂಘಗಳನ್ನು ಕಟ್ಟುವಲ್ಲಿ ಹಗಲು ರಾತ್ರಿಯೆನ್ನದೆ (ಹೆಚ್ಚಾಗಿ ರಾತ್ರಿ ಸಮಯಗಳಲ್ಲಿ) ದುಡಿಯುವ ಸ್ವಯಂಸೇವಕಿಯರು ತಮ್ಮ ಸ್ಥಿತಿಗತಿಯ ಕಟುವಾಸ್ತವಕ್ಕೆ ಪ್ರತಿಕ್ರಿಯಿಸುತ್ತಾ ಎಲ್ಲೆಲ್ಲೂ ಸಂಘಟಿತರಾಗತೊಡಗಿದ್ದಾರೆ.

"ಮಹಿಳಾ ಅಭಿವೃದ್ಧಿ ಕಾರ್ಯಕ್ರಮ – WDP" ಎಂಬ ಹೆಸರಿನಲ್ಲಿ 1984ರಲ್ಲಿ ರಾಜಸ್ಥಾನದಲ್ಲಿ ಪ್ರಾರಂಭವಾದ ಇದು 1992ರ ವೇಳೆಗೆ ಉತ್ತರಪ್ರದೇಶ, ಕರ್ನಾಟಕ, ಗುಜರಾತ್, ಆಂಧ್ರಪ್ರದೇಶ ಮತ್ತು ಒರಿಸ್ಸಾ ರಾಜ್ಯಗಳಿಗೆ "ಮಹಿಳಾ ಸಮಖ್ಯಾ" ಎನ್ನುವ ಹೆಸರಿನಲ್ಲಿ ವಿಸ್ತರಣೆಯಾಗಿದೆ. ಇಲ್ಲಿ ಅತ್ಯಂತ ಹಳೆಯದಾದ ರಾಜಸ್ಥಾನದ WDPಯಲ್ಲಿನ ಒಂದು ಘಟನೆಯನ್ನಾಧರಿಸಿ ಭಾರತದ ಬೇರೆ ಬೇರೆ ಕಡೆಯ ಏಳು ಸ್ವಾಯತ್ತ ಮಹಿಳಾ ಗುಂಪುಗಳು ನಡೆಸಿದ ಸತ್ಯಶೋಧನೆ ಮತ್ತು WDPಗಳ ಪರಿಣಾಮವನ್ನು ಕುರಿತು ಹೊರತಂದಿರುವ ಟೀಕಾತ್ಮಕ ವಿಶ್ಲೇಷಣೆ 36 ಪುಟಗಳ DEVELOPMENT FOR WHOM? ಎನ್ನುವ ಕಿರುಪುಸ್ತಿಕೆ. ಅದರ ಸಂಗ್ರಹಾನುವಾದವನ್ನು ಇಲ್ಲಿ ಮಾಡಲಾಗಿದೆ.

ವಿ. ಗಾಯತ್ರಿ

1991ರ ಮಾರ್ಚ್ ಎರಡನೇ ವಾರದಲ್ಲಿ ಭಾರತದಾದ್ಯಂತ ಎಲ್ಲ ಮಹಿಳಾ ಗುಂಪುಗಳಿಗೆ ರಾಜಸ್ತಾನದ ಅಜಮೀರದಲ್ಲಿರುವ 'ಮಹಿಳಾ ಸಮೂಹ-ಖೇರ್ಕಿ' ಮತ್ತು 'ಮಹಿಳಾ ಸಮೂಹ-ಅಜಮೀರ' ಎಂಬ ಎರಡು ಮಹಿಳಾ ಗುಂಪುಗಳಿಂದ ಒಂದು ಪತ್ರ ಬಂತು. ಈ ಪತ್ರದ ಕಾಳಜಿ ಇದ್ದದ್ದು ರಾಜಸ್ತಾನದ ಮಹಿಳಾ ಅಭಿವೃದ್ಧಿ ಕಾರ್ಯಕ್ರಮ (WDP) ದಲ್ಲಿ ಕೆಲಸ ಮಾಡುತ್ತಿರುವ ಐವರು ಸಾಥಿನ್‌ಗಳು (ಹಳ್ಳಿ ಮಟ್ಟದ ಕೆಲಸಗಾರರು) ಮತ್ತು ಒಬ್ಬ ಪ್ರಚೇತ (ಅವರ ಕೋ-ಆರ್ಡಿನೇಟರ್) ಇವರುಗಳನ್ನು ಕೆಲಸದಿಂದ ಅಮಾನತ್ತುಗೊಳಿಸಿದ್ದನ್ನು ಕುರಿತಾಗಿ.

ಈ ಪತ್ರದಲ್ಲಿ ಹೇಳಿದ್ದ ಪ್ರಕಾರ, ಕ್ಯಾಲಿಕಟ್‌ನಲ್ಲಿ 1990ರ ಡಿಸೆಂಬರ್‌ನಲ್ಲಿ ನಡೆದ ಮಹಿಳಾ ಚಳವಳಿಯ ರಾಷ್ಟ್ರೀಯ ಸಮಾವೇಶದಲ್ಲಿ ರಾಜಸ್ತಾನದ ಅಜಮೀರ ಜಿಲ್ಲೆಯಿಂದ ಭಾಗವಹಿಸಿದ 40 ಜನ ಮಹಿಳೆಯರಲ್ಲಿ 17 ಜನ ಮಹಿಳಾ ಸಮೂಹ, ಖೇರ್ಕಿಯನ್ನು ಪ್ರತಿನಿಧಿಸಿದ್ದರು. ಸ್ಥಳೀಯ ಮಹಿಳಾ ಗುಂಪೊಂದರ ಸದಸ್ಯರಾದ ಇವರೆಲ್ಲಾ ತಮ್ಮ ಕೈಯಿಂದ ಹಣ ಹಾಕಿಕೊಂಡು ಸಮಾವೇಶದಲ್ಲಿ ಭಾಗವಹಿಸಿ ಅಲ್ಲಿನ ಚರ್ಚೆಗಳಲ್ಲಿ ಸಕ್ರಿಯರಾಗಿ ಪಾಲ್ಗೊಂಡಿದ್ದರು. ಇವರಲ್ಲಿ 10 ಜನ ಸರ್ಕಾರ ನಡೆಸುತ್ತಿರುವ ಮಹಿಳಾ ಅಭಿವೃದ್ಧಿ ಕಾರ್ಯಕ್ರಮ WDP ಯಲ್ಲಿಯೂ ಕೆಲಸ ಮಾಡುತ್ತಾರೆ.

ಇವರುಗಳೆಲ್ಲಾ ಸಮಾವೇಶದಿಂದ ಬಂದ ಮೇಲೆ WDPಯ ಅಧಿಕಾರಿಣಿಯರು ಮೂರು ಜನ ಸಾಥಿನ್‌ಗಳನ್ನು ರಾತ್ರೋರಾತ್ರಿ ಅವರ ಹಳ್ಳಿಗಳಿಂದ ಅಜಮೀರದಲ್ಲಿರುವ ಜಿಲ್ಲಾ ಕಛೇರಿಗೆ ಕೊಂಡೊಯ್ದು ಅವರಿಗೆ ವ್ಯವಸ್ಥಿತವಾದ ರೀತಿಯಲ್ಲಿ ಕಿರುಕುಳ ಕೊಟ್ಟು, ಅವಮಾನಗೊಳಿಸಿದರಲ್ಲದೆ, ಕ್ಯಾಲಿಕಟ್‌ನಲ್ಲಿ ತಮ್ಮದೇ ಸ್ವತಂತ್ರ ಬ್ಯಾನರಿನಡಿ ಭಾಗವಹಿಸಿ WDP ಯ ಘನತೆಗೆ ಕುಂದು ತಂದರೆಂದು ಇವರನ್ನು ಬಲುವಾಗಿ ಬಯ್ಯಲಾಯಿತು. ಕೊನೆಗೆ 1991ರಲ್ಲಿ, 'ಪ್ರಚೇತ' ಸ್ಥಾನದಲ್ಲಿ 4 ವರ್ಷಗಳಿಂದ ಕೆಲಸ ಮಾಡುತ್ತಿದ್ದ ಕಿರಣ್‌ದುಬೆ ಎಂಬಾಕೆಯನ್ನು ಸಾಥಿನ್ ಸ್ಥಾನದಲ್ಲಿ ಕೆಲಸ ಮಾಡುತ್ತಿದ್ದ ಪತಸಿಬಾಯಿ, ಗೀತಾಬಾಯಿ, ಜುಮಾಬಾಯಿ, ಸೌರದ್‌ಬಾಯಿ ಮತ್ತು ನಂದು ಬಾಯಿ ಇವರುಗಳನ್ನು ಯಾವುವೇ ಕಾರಣ ಕೊಡದೆ ಕೆಲಸದಿಂದ ತೆಗೆದು ಹಾಕಲಾಯಿತು.

ಮಹಿಳಾ ಸಮೂಹ ಖೇರ್ಕಿಯವರು ಬರೆದ ಪತ್ರದಲ್ಲಿ ಹೀಗೆ ಹೇಳಿದ್ದರು, "ನಮ್ಮ ತಪ್ಪಾದರೂ ಏನು ? ನಾವು ಕ್ಯಾಲಿಕಟ್ ಸಮಾವೇಶದಲ್ಲಿ ಭಾಗವಹಿಸಿದ್ದು ತಪ್ಪೇ ? ನಮಗೆ ಕೊಡುವ ತರಬೇತಿಗಳಲ್ಲಿ ನಾವು ಸಂಘಟಿತರಾಗಬೇಕೆಂದು ಹೇಳಿಕೊಡಲಾಗುತ್ತದೆ. ನಾವು ನಮ್ಮ ಕೈಯಿಂದ ಹಣ ಹಾಕಿಕೊಂಡು ಸಮಾವೇಶದಲ್ಲಿ ಭಾಗವಹಿಸಿದೆವು. ನಮ್ಮದೇ ಗುಂಪಿನ ಬ್ಯಾನರ್ ಎತ್ತಿದ್ದರಲ್ಲಿ ತಪ್ಪೇನು ? ಸಾಥಿನರ ವಾರ್ತಾಪತ್ರದಲ್ಲಿ, ಒಬ್ಬ ಸಾಥಿನ್‌ಳನ್ನು ತೆಗೆದುಹಾಕಬೇಕಾದರೆ ಹಳ್ಳಿಯಲ್ಲಿ ಸಭೆ ಕರೆದು, ಹಳ್ಳಿಯ ಮಹಿಳೆಯರ ಅಭಿಪ್ರಾಯವನ್ನು ತೆಗೆದುಕೊಳ್ಳಬೇಕೆಂದಿದೆ. ಆದರೆ ಹಾಗೆ ಮಾಡಲಾಗಿಲ್ಲ. ನಮಗೆ ಅನ್ಯಾಯವಾಗಿದೆ. ನ್ಯಾಯಬೇಕು." ಕ್ಯಾಲಿಕಟ್ ಸಮಾವೇಶದಲ್ಲಿ ಭಾಗವಹಿಸಿದ ಎಲ್ಲ ಮಹಿಳಾ ಗುಂಪುಗಳಿಗೂ ಕಳಿಸಲಾದ ಈ ಪತ್ರ ಇಂತಹ ಪ್ರಶ್ನೆಗಳನ್ನು ವಿಸ್ತಾರ ವೇದಿಕೆಗೆ ತರುವ ಮತ್ತು ಭಾರತದಾದ್ಯಂತ ಮಹಿಳಾ ಗುಂಪುಗಳ ಬೆಂಬಲಕ್ಕಾಗಿ ಮನವಿ ಮಾಡಿಕೊಳ್ಳುವ ಪ್ರಯತ್ನವಾಗಿದ್ದಿತು. ಈ ಮನವಿಗೆ ಪ್ರತಿಕ್ರಿಯಿಸಿದ ಅನೇಕಾನೇಕ ಮಹಿಳಾ ಸ್ವಾಯತ್ತ ಗುಂಪುಗಳು ಕೆಲಸ ಕಳೆದುಕೊಂಡ ಮಹಿಳೆಯರಿಗೆ ತಮ್ಮ ಬೆಂಬಲ ವ್ಯಕ್ತಪಡಿಸುತ್ತಾ WDP ಅಧಿಕಾರಿಣಿಯರ ಸ್ವೇಚ್ಛಾನುಸಾರ ತೀರ್ಮಾನವನ್ನು ಖಂಡಿಸಿದವು.

ಇದನ್ನು ಇಲ್ಲಿಗೇ ಬಿಡಲು ಇಚ್ಛಿಸದ ದೆಹಲಿಯ 'ಸಹೇಲಿ'ಯು ಈ ಮಹಿಳೆಯರಿಗೆ ಬೆಂಬಲ ನೀಡಲು ಸ್ಪಷ್ಟ ಕ್ರಿಯೆಗಳನ್ನು ರೂಪಿಸುವ ಸಲುವಾಗಿ ಮಹಿಳಾ ಗುಂಪುಗಳ ಒಂದು ಸಭೆಯನ್ನು ಕರೆಯಿತು. ಅನ್ಯಾಯಕ್ಕೊಗಾದ ಮಹಿಳಾ ಕೆಲಸಗಾರ್ತಿಯರಿಗೆ ಬೆಂಬಲ ರೂಪಿಸುವುದರ ಜತೆಗೆ, ಸರ್ಕಾರ ನಡೆಸುವ ಮಹಿಳಾ

ಅಭಿವೃದ್ಧಿ ಕಾರ್ಯಕ್ರಮಗಳು ಮತ್ತು ಮಹಿಳಾ ಚಳವಳಿಯ ಮೇಲೆ ಅವುಗಳಿಂದ ಆಗುತ್ತಿರುವ ದುಷ್ಪರಿಣಾಮವನ್ನು ಕುರಿತು ವಿಶ್ಲೇಷಣೆ ನಡೆಸಲು ತೀರ್ಮಾನಿಸಿದವು. ಇದಕ್ಕಾಗಿ ಒಂದು "ಸತ್ಯಶೋಧನಾ ಕಮಿಟಿ" ಯನ್ನು ರೂಪಿಸಿಕೊಂಡು ಅಜಮೀರಕ್ಕೆ ಹೋಗುವದೆಂದು ತೀರ್ಮಾನಿಸಲಾಯಿತು. ಏಳು ಸ್ವಾಯತ್ತ ಮಹಿಳಾ ಗುಂಪುಗಳ ಸದಸ್ಯರು ಈ ಕಮಿಟಿಯಲ್ಲಿದ್ದರು.

ಅಜಮೀರಕ್ಕೆ ಹೀಗೆ ಬಂದ ಎಲ್ಲರಿಗೂ ಕೆಲಸ ಕಳೆದುಕೊಂಡ ಆರು ಜನ ಮಹಿಳೆಯರೆಡೆಗಿನ ಕಾಳಜಿಯೇ ಮುಖ್ಯವಾಗಿತ್ತಾದರೂ, ಸರ್ಕಾರ ನಡೆಸುವ ಮಹಿಳಾ ಅಭಿವೃದ್ಧಿ ಕಾರ್ಯಕ್ರಮಗಳ ಅನುಭವದ ವಿಶ್ಲೇಷಣೆಗೂ ಇದೇ ಪ್ರಾರಂಭವನ್ನು ಒದಗಿಸಿತು. ಮಹಿಳಾ ಅಭಿವೃದ್ಧಿಗಾಗಿ ಸರ್ಕಾರೀ ಕಾರ್ಯಕ್ರಮವನ್ನು ಪ್ರಾರಂಭಿಸಿದ ಮೊದಲ ರಾಜ್ಯವೇ ರಾಜಸ್ಥಾನ. 1984ರಲ್ಲಿ ಇದು ಪ್ರಾರಂಭವಾದ ನಂತರದ ಸಮಯದಲ್ಲಿ ಉತ್ತರಪ್ರದೇಶ, ಕರ್ನಾಟಕ, ಗುಜರಾತ್ ಮತ್ತು ಆಂಧ್ರ ರಾಜ್ಯಗಳು ಕೂಡ ಇಂತದೇ ಕಾರ್ಯಕ್ರಮಗಳನ್ನು ರೂಪಿಸಿಕೊಂಡಿವೆ, 'ಮಹಿಳಾ ಸಮಖ್ಯಾ' ಎಂಬ ಹೆಸರಿನಲ್ಲಿ. ಇದೇ ಬಗೆಯ ಕಾರ್ಯಕ್ರಮಗಳನ್ನು ಮುಂಬರುವ ವರ್ಷಗಳಲ್ಲಿ ಇತರೇ ರಾಜ್ಯಗಳಿಗೂ ವಿಸ್ತರಿಸುವ ಯೋಜನೆ ಸರ್ಕಾರಕ್ಕಿದೆ. ಸರ್ಕಾರ ಇದನ್ನು ಇಡೀ ದೇಶಕ್ಕೇ ಹಮ್ಮಿಕೊಳ್ಳುವಂತಹ ಸಂದರ್ಭದಲ್ಲಿ ಅತ್ಯಂತ ಹಳೆಯ ಕಾರ್ಯಕ್ರಮವಾದ 10 ವರ್ಷಗಳಿಂದ ನಡೆಯುತ್ತಿರುವ WDP ಮುಂಬರುವ ಬೆಳವಣಿಗೆಗಳಿಗೆ ಸೂಚಕವಾಗಬಲ್ಲದು ಕೂಡ.

ಸರ್ಕಾರೀ ಕಾರ್ಯಕ್ರಮವಾದರೂ WDP ಮಾಮೂಲೀ ಸರ್ಕಾರೀ ಕಾರ್ಯಕ್ರಮಗಳಿಗಿಂತ ಅತ್ಯಂತ ಭಿನ್ನವಾದುದು. 1988ರಲ್ಲಿ ಪಾಟ್ನಾದಲ್ಲೂ, 1990ರಲ್ಲಿ ಕ್ಯಾಲಿಕಟ್‌ನಲ್ಲೂ ಮಹಿಳಾ ಚಳವಳಿಯ ರಾಷ್ಟ್ರೀಯ ಸಮಾವೇಶಗಳಲ್ಲಿ ಭಾಗವಹಿಸುತ್ತಿದ್ದ WDP ವ್ಯಾಪ್ತಿಯಲ್ಲಿ ಬರುವ ರಾಜಸ್ಥಾನದ ಹಳ್ಳಿಯ ಹೆಂಗಸರು ತಮ್ಮ ಸಂವೇದನಾಶೀಲ, ಟೀಕಾತ್ಮಕ ಅಭಿವ್ಯಕ್ತಿಗಳಿಂದಲೂ ವರ್ಣಮಯ ಸಾಂಸ್ಕೃತಿಕ ಚಟುವಟಿಕೆಗಳಿಂದಲೂ ಎಲ್ಲರ ಗಮನ ಸೆಳೆದಿದ್ದರು. ಅತ್ಯಂತ ವಂಚನೆಗೊಳಗಾದ ಹಳ್ಳಿಯ ಮಹಿಳೆಯರನ್ನು ದೊಡ್ಡ ರೀತಿಯಲ್ಲಿ ಮುಟ್ಟುವುದು WDPಯ ಒಂದು ಇತ್ಯಾತ್ಮಕ ಅಂಶ. ಆದೇನೇಯಾದರೂ 'ಸಶಕ್ತತೆ'ಯ ಪ್ರಕ್ರಿಯೆಯೇ ವೈರುಧ್ಯಗಳನ್ನು, ಸಂಘರ್ಷಣೆಗಳನ್ನು ದುಷ್ಕರ್ಮ ಫಲವೆಂಬಂತೆ ಹುಟ್ಟುಹಾಕುತ್ತಿದೆ.

ಸತ್ಯಶೋಧನ ಸಮಿತಿಯಲ್ಲಿದ್ದ ಅನೇಕರು ಒಂದಿಲ್ಲಾ ಒಂದು ರೀತಿಯಲ್ಲಿ WDPಯ ಜತೆ ಸಂಪರ್ಕವಿದ್ದವರೇ. ಹಾಗಾಗಿ ಅವರೆಲ್ಲರ ಗ್ರಹಿಕೆಯಲ್ಲಿ ಸಾಮ್ಯವಿತ್ತು. ನಿರೀಕ್ಷಿಸಿದ್ದಂತೆಯೇ ಮಹಿಳಾ ಕೆಲಸಗಾರರ ವಜಾ ಬಗ್ಗೆ ತಂತಾಗಿಯೇ ಹೊರಬಂದ ಪ್ರತಿಭಟನೆ ಇತ್ತು. WDPಯ ಅಧಿಕಾರಿಣಿಯರ ಕಿರುಕುಳದ ಬಗ್ಗೆ ಸಿಟ್ಟಿತ್ತು.

ಮಧ್ಯ ಪ್ರವೇಶಿಕೆಯ ಸಮಯದಲ್ಲಿ ಸತ್ಯಶೋಧಕ ಸಮಿತಿ ಅನೇಕ ದ್ವಂದ್ವಗಳನ್ನೆದುರಿಸಬೇಕಾಯಿತು. ಮಹಿಳಾ ಚಳವಳಿಯ ಸಮಾವೇಶಗಳಂತಹ ಅನೇಕ ಕಡೆಗಳಲ್ಲಿ WDP ಯ ಅಧಿಕಾರಿಣಿಯರ ಜತೆ ಸಹ ಬಾಂಧತ್ವದ, ಸೋದರಿಯತ್ವದ ಸಂಬಂಧ ಇವರಿಗೆ ಉಂಟಾಗಿತ್ತು. ಆದೇನೇಯಾದರೂ ಮಹಿಳಾ ಚಳವಳಿಯಲ್ಲಿನ ಇವರು ಸರ್ಕಾರೀ ಕಾರ್ಯಕ್ರಮದಲ್ಲಿ ಅಧಿಕಾರ ಸ್ಥಾನದಿಂದ ಕೆಲಸ ನಿರ್ವಹಿಸುತ್ತಿರುವಾಗ ವಯಕ್ತಿಕ ನೆಲೆಗಳನ್ನು ಇಲ್ಲಿ ಕಳೆದುಕೊಳ್ಳಲೇಬೇಕಾಯಿತು. ಇನ್ನೂ ಮುಂದುವರೆದು WDPಯು ದೊಡ್ಡ ರೀತಿಯಲ್ಲಿ ಹಳ್ಳಿಯ ಹೆಂಗಸರನ್ನು ತಲುಪಲು ಸಾಧ್ಯವಾಗಿದ್ದರೂ, ಸ್ತ್ರೀವಾದೀ ಪಾರಿಭಾಷಿಕ ಆಡಂಬರ (Jargon) ಗಳನ್ನು, ಸಂಕೇತಗಳನ್ನು ಮತ್ತು ವಿಧಾನಗಳನ್ನು ಅಳವಡಿಸಿಕೊಂಡಿದ್ದರೂ ಅದೊಂದು ಸರ್ಕಾರೀ ಕಾರ್ಯಕ್ರಮವೇ. ಮಹಿಳೆಯರು ಮತ್ತು ಸರ್ಕಾರದ ನಡುವೆ ಆಸಕ್ತಿಗಳಲ್ಲಿ ಸಂಘರ್ಷವಿದ್ದಾಗ ಇಂತಹ ವೈರುದ್ಯ ಸ್ಪಷ್ಟಗೊಳ್ಳುತ್ತದೆ.

## ಮಹಿಳಾ ಅಭಿವೃದ್ಧಿ ಕಾರ್ಯಕ್ರಮದ ರಚನೆ

ಮೂರು ಬಗೆಯ ಅಂಶಗಳು ಒಳಗೊಳ್ಳುವಂತೆ WDP ಯನ್ನು ಯೋಜಿಸಲಾಗಿದೆ. "ಒಳಶಕ್ತಿ ಮತ್ತು ಹಳ್ಳಿ ಮಟ್ಟದಲ್ಲಿ ಸ್ವಯಂಸೇವೆಯ ಸಂಪರ್ಕಗಳು ; ಸರ್ಕಾರದ ನಿರಂತರ ದೃಢತೆ ಮತ್ತು ರಕ್ಷಣೆ ; ಮತ್ತು ಸಂಶೋಧನಾ ಅಂಗಗಳಿಂದ ಟೀಕಾತ್ಮಕ ವಿಶ್ಲೇಷಣೆಯ ನಿರಂತರ ಹರಿವು" ಇವು ಮೂರು ಅಂಶಗಳನ್ನು ಒಳಗೊಂಡಿರುವಂತಹ ರಚನೆಯಿದು.

ಆಯ್ಕೆಗೊಂಡ ಪ್ರತಿ ಗ್ರಾಮ ಪಂಚಾಯತಿಗೂ ಒಬ್ಬ

ಹಳ್ಳಿ ಮಟ್ಟದ **ಸಾಥಿನ್** ಎನ್ನುವ ತರಬೇತಿ ಪಡೆದ ಕೆಲಸಗಾರ್ತಿಯಿದ್ದು ಅವರು ಆಯಾ ಗ್ರಾಮ ಪಂಚಾಯತಿ ವ್ಯಾಪ್ತಿಯಲ್ಲಿ ಬರುವ ಯಾವುದೇ ಹಳ್ಳಿಯವರಾಗಿರುತ್ತಾರೆ. ಹಳ್ಳಿ ಮಟ್ಟಗಳಲ್ಲಿ ಮಹಿಳೆಯರ ಗುಂಪುಗಳನ್ನು ಕಟ್ಟುವುದು ಈಕೆಯ ಜವಾಬ್ದಾರಿ. ಹೀಗೆ ಹತ್ತು ಸಾಥಿನ್‌ರನ್ನು ಒಳಗೊಂಡ ಹತ್ತು ಗ್ರಾಮ ಪಂಚಾಯತಿಗೆ ಒಬ್ಬ **ಪ್ರಚೇತ** ಅಥವಾ ಕೋ-ಆರ್ಡಿನೇಟರ್ ಇರುತ್ತಾರೆ. ಬ್ಲಾಕ್ ಹಂತದ ಸರ್ಕಾರೀ ನೌಕರರಾದ ಈಕೆ ಸಾಥಿನರಿಗೆ ಮಾರ್ಗದರ್ಶನ ಬೆಂಬಲಗಳನ್ನು ನೀಡುವುದರ ಜತೆಗೆ ಜಿಲ್ಲಾ ಮಟ್ಟಕ್ಕೆ ಸಂಪರ್ಕ ಸೇತುವಾಗಿರುತ್ತಾರೆ. ಪ್ರತಿಜಿಲ್ಲಾ ಮಟ್ಟದಲ್ಲಿ ಜಿಲ್ಲಾ ಕಲೆಕ್ಟರರು ಚೇರಮನ್ನರಾಗಿದ್ದು ಜಿಲ್ಲಾ ಕಾರ್ಯಕ್ರಮ ನಿರ್ದೇಶಕರೂ ಮತ್ತು ಅವರ ಸಹಾಯಕರಾಗಿ ಪ್ರಾಜೆಕ್ಟ್ ಆಫೀಸರ್ ಇರುತ್ತಾರೆ.

ರಾಜ್ಯ ಮಟ್ಟದಲ್ಲಿ ಮಹಿಳಾ ಅಭಿವೃದ್ಧಿ ಕಾರ್ಯಕ್ರಮದ ನಿರ್ದೇಶಕರು ಇಡೀ ಕಾಯಕ್ರಮದ ಒಟ್ಟು ಜವಾಬ್ದಾರಿ, ಅಧಿಕಾರ ಹೊಂದಿರುತ್ತಾರೆ.

### ಮಹಿಳಾ ಅಭಿವೃದ್ಧಿ ಕಾರ್ಯಕ್ರಮದ ಸಿದ್ಧಾಂತ-ದೃಷ್ಟಿಕೋನಗಳು

ಮಹಿಳಾ ಅಭಿವೃದ್ಧಿ ಕಾರ್ಯಕ್ರಮವು ಆರನೇ ಪಂಚವಾರ್ಷಿಕ ಯೋಜನೆಯಲ್ಲಿ ಮಹಿಳಾ ಅಭಿವೃದ್ಧಿಯ ಬಗ್ಗೆ ಸರ್ಕಾರ ರೂಪಿಸಿದ ಪಾಲಿಸಿ ಚೌಕಟ್ಟಿನ ಅನುಸಾರವಾದದ್ದಾಗಿದೆ. "ಶಾಲೆಗೆ ಹೋಗುವ ಅವಕಾಶವಿಲ್ಲದೆ ಬದುಕಿನ ಕಟು ಸತ್ಯಗಳಿಗೆ ಪಕ್ಕಾದ, ಕೆಲಸಗಾರರೆಂದು ಪರಿಗಣಿಸಲ್ಪಡದೆಯೇ ದುಡಿಯುವ, ಬದುಕಿನಾದ್ಯಂತ ತಂದೆ, ಗಂಡ, ಮಗ ಮುಂತಾದವರ ಆಜ್ಞಾಪಾಲನೆಯಲ್ಲೇ ಜೀವಿಸಬೇಕಾದ ಮಹಿಳೆಯರು ಒಳಗಾಗಿರುವ ಅನ್ಯಾಯವನ್ನು ಅರ್ಥ ಮಾಡಿಕೊಳ್ಳಲು ವಿಶೇಷ ಸಂವೇದನಾಶೀಲತೆಯೇನೂ ಬೇಕಾಗಿಲ್ಲ" ಎನ್ನುವ ಈ ಪಾಲಿಸಿ ಮಹಿಳೆಯರ ಸ್ಥಿತಿಗತಿ ಸುಧಾರಣೆಯಾಗಬೇಕಾದರೆ ಕುಟುಂಬದಂತಹ ಸಂಸ್ಥೆಗಳನ್ನು ಬಲಗೊಳಿಸುವುದರ ಜತೆಗೇ ಮಹಿಳೆಯರನ್ನು ತಮ್ಮದೇ ಅವಶ್ಯಕತೆಗಳಿರುವ, ಆಶೋತ್ತರಗಳಿರುವ, ಸಮಸ್ಯೆಗಳಿರುವ ಸ್ವತಂತ್ರ ಜೀವಿಗಳೆಂದು ಪರಿಗಣಿಸಬೇಕಾಗುತ್ತದೆ ಎನ್ನುತ್ತದೆ.

ಇದೆಲ್ಲವನ್ನೂ ಸಾಧಿಸಲು, "ಮಾಹಿತಿ ನೀಡುವಿಕೆ, ಶಿಕ್ಷಣ ಮತ್ತು ತರಬೇತಿಗಳಲ್ಲದೆ ಅವರ ಸಾಮಾಜಿಕ ಮತ್ತು ಆರ್ಥಿಕ ಸ್ಥಿತಿಗತಿಗಳನ್ನರಿತು ಅದನ್ನು ಸುಧಾರಿಸಿಕೊಳ್ಳುವಲ್ಲಿ ಸಹಾಯ ಮಾಡುವ ಮೂಲಕ ಮಹಿಳೆಯರನ್ನು ಸಶಕ್ತಗೊಳಿಸಬೇಕು."

**ಈ ಕೆಳಕಂಡ ಕೆಲವು ಗ್ರಹಿಕೆಗಳನ್ನಿಟ್ಟುಕೊಂಡು** WDP **ಯನ್ನು ರೂಪಿಸಲಾಗಿದೆ :**

* ಮಾಹಿತಿಯ ಕೊರತೆಯಿಂದಲೂ, ಪಡೆದುಕೊಳ್ಳುವ ಬಗೆ ತಿಳಿಯದೆಯೂ ಅನೇಕ ಸರ್ಕಾರೀ ಸೌಲಭ್ಯಗಳು ಮಹಿಳೆಯರನ್ನು ತಲುಪಲಾಗಿಲ್ಲ. ಹಳ್ಳಿಗಳಲ್ಲಿ ಮಹಿಳೆಯರ ಸಕ್ರಿಯ ಭಾಗವಹಿಕೆಯಿರುವಂತಹ ಪ್ರಕ್ರಿಯೆಗಳನ್ನು ಹುಟ್ಟು ಹಾಕುವ ಮೂಲಕ ಅದು ದಕ್ಕುವಂತೆ ಮಾಡಲು ಸಾಧ್ಯ.
* ಅಭಿವೃದ್ಧಿಯೆನ್ನುವುದನ್ನು 'ಆಂತರಿಕಗೊಂಡ ಬೆಳವಣಿಗೆ' ಎಂದು ಗ್ರಹಿಸಬೇಕಾಗುತ್ತದೆಯೇ ವಿನಃ ಕೇವಲ ಸೌಲಭ್ಯಗಳನ್ನು ಹಂಚುವಂತಹದ್ದೆಂದಲ್ಲ. ಇಲ್ಲಿ ಆತ್ಮಗೌರವವನ್ನು ಮತ್ತು ಗುಂಪಿನ ಪ್ರಯತ್ನವನ್ನು ಬೆಳೆಸುವಂತಹ ಭರವಸೆಯ ವಾತಾವರಣ ಮುಖ್ಯ. ಹಳ್ಳಿಯ ಮಹಿಳೆಯರಿಗೆ ಇಂತಹ ವಾತಾವರಣವನ್ನು ಸೃಷ್ಟಿಸುವುದರಲ್ಲಿ ಈ ಕಾರ್ಯಕ್ರಮದ ಮುಖ್ಯ ಒತ್ತಿರುತ್ತದೆ.
* ಬಹುಕಾಲದಿಂದಲೂ ಕುಟುಂಬ, ಸಮಾಜ, ಸರಕಾರ ಎಲ್ಲೆಲ್ಲೂ ಪುರುಷರೇ ಮಹಿಳಾ ಅಭಿವೃದ್ಧಿ ಕಾರ್ಯಕ್ರಮದ ಜವಾಬ್ದಾರಿ ಹೊತ್ತಿದ್ದರು. ಈ ಎಲ್ಲ ಮಟ್ಟದಲ್ಲೂ ಅದು ಮಹಿಳೆಯರನ್ನೇ ಹೊಂದಿರುವಂತಹ ಸ್ಪಷ್ಟ ಬದಲಾವಣೆಗೆ ಇಲ್ಲಿ ಅಗತ್ಯ.

ಇದೆಲ್ಲಾ ಹೀಗಿದ್ದರೂ WDP ಕೆಲವು ಸಮಸ್ಯೆಗಳ ವಿಚಾರದಲ್ಲಿ ತೆಗೆದುಕೊಂಡ ತೀರ್ಮಾನ ಈ ಕಾರ್ಯಕ್ರಮದ ದೃಷ್ಟಿಕೋನಕ್ಕೆ ಹಿಡಿದ ಕನ್ನಡಿಯಾಗಬಲ್ಲದು. ಸರ್ಕಾರಿ ಕಾರ್ಯಕ್ರಮಗಳನ್ನು ತುಂಬಾ ಸಮರ್ಥವಾಗಿ ಅನುಷ್ಠಾನಗೊಳಿಸುವಲ್ಲಿ ಯಷ್ಟೇ ಇಲ್ಲಿನ 'ವಿಶಿಷ್ಟ' ಪ್ರಯತ್ನಗಳೆಲ್ಲಾ ವ್ಯಯವಾಗಿರುವುದು. ಹಳ್ಳಿಯಲ್ಲಿ ತಲೆದೋರುವ ಯಾವುದೇ ಸಮಸ್ಯೆಗೆ ದೊಡ್ಡ ಮಟ್ಟದ ಸರಕಾರೀ ಅಧಿಕಾರಿಗಳನ್ನು ಪ್ರಶ್ನಿಸದೆಯೇ ಹಳ್ಳಿ ಮಟ್ಟದಲ್ಲಿ ಕೆಲಸ ಮಾಡುವ (ಉದಾ ; ಎ ಎನ್ ಎಮ್‌ಗಳು)

ನೌಕರರೊಡನೆ ಸಾಥಿನ್‌ರಿಗೆ ಹೆಚ್ಚಿನ ಸೌಹಾರ್ದಯುತ ಕಾರ್ಯ ಸಂಬಂಧ ಬೆಳೆಸುವಲ್ಲಿಯಷ್ಟೇ ಇದು ಕೊನೆಗೊಳ್ಳುತ್ತದೆ. ಇನ್ನು ಕುಟುಂಬ ಯೋಜನೆಗೆ ಸಂಬಂಧಿಸಿದ ಟಾರ್ಗೆಟ್ ಆಧಾರಿತ ಕಾರ್ಯಕ್ರಮ ಅನುಷ್ಠಾನಕ್ಕೆ ಸಂಬಂಧಿಸಿದಂತೆಯಂತೂ WDPಯ ಕಾರ್ಯಕರ್ತೆಯರು ತೆಗೆದುಕೊಂಡ ಯಾವುದೇ ಸ್ತ್ರೀಪರ ನಿಲುವುಗಳಿಗೆ ಬೆಂಬಲ ದೊರೆತಿಲ್ಲ. ಮೇಲಾಗಿ ಟಾರ್ಗೆಟ್ ತಲುಪುವಲ್ಲಿ ಆರೋಗ್ಯ ಕಾರ್ಯಕರ್ತರಿಗೆ ಸಹಾಯ ಮಾಡುವಂತೆ ಬೆದರಿಕೆಯ ಒತ್ತಡವನ್ನು ತರಲಾಗಿದೆ.

### ಸೇವೆಯ ಸ್ಥಿತಿಗತಿಗಳು

ಮಹಿಳಾ ಅಭಿವೃದ್ಧಿ ಕಾರ್ಯಕ್ರಮದ ಪ್ರೊಜೆಕ್ಟ್ ಆಫೀಸರ್ ಮತ್ತು ಪ್ರಚೇತರ ಸೇವೆಯು "ರಾಜಸ್ತಾನ್ ಸಿವಿಲ್ ಸರ್ವಿಸಸ್" ಕಾನೂನು ಕಟ್ಟಳೆಗಳಿಗೆ ಒಳಪಟ್ಟಿದ್ದು, ಇದು ಅವರ ನೇಮಕಾತಿ, ಸಂಬಳ ಮತ್ತು ಸೇವೆಯ ಇನ್ನಿತರ ವಿಷಯಗಳಿಗೆ ಅನ್ವಯಿಸುತ್ತದೆ. ಇವರು 1947ರ Industrial disptute act ಕೆಳಗಡೆ ರಕ್ಷಣೆ ಪಡೆಯಬಹುದಾಗಿದೆ. ಇಂತಹ ಸ್ಪಷ್ಟ ಕಾನೂನು ಕಟ್ಟಳೆಗಳಿದ್ದೂ, ಕಾರ್ಯಕ್ರಮ ನಿರ್ದೇಶಕರು ಇತರ ಕೆಲಸಗಾರರಿಗೆ ಸಂಬಂಧಿಸಿದಂತೆ ಇಚ್ಛಾನುಸಾರ ವರ್ತಿಸುತ್ತಾ ಅನೇಕರನ್ನು ಬಲಿಪಶುಗಳಾಗಿಸಿದ್ದಾರೆ.

1985ರಿಂದಲೂ ಅಜಮೀರಿನ DWDA ನಲ್ಲಿ ಪ್ರಚೇತಳಾಗಿ ಕೆಲಸ ಮಾಡುತ್ತಿದ್ದ ಕಿರಣ್‌ದುಬೆ ಎಂಬಾಕೆಯನ್ನು 1991ರಲ್ಲಿ ಯಾವುದೇ ಕಾರಣ ಕೊಡದೆ ಕೆಲಸದಿಂದ ಅನಾಮತ್ತುಗೊಳಿಸಲಾಗಿದೆಯೆಂದು ಆದೇಶ ನೀಡಲಾಯಿತು. ಅಲ್ಲಿಯವರೆಗೂ ತಾತ್ಕಾಲಿಕ ನೌಕರಳೆಂದೇ ಪರಿಗಣಿಸಲ್ಪಟ್ಟಿದ್ದ ಕಿರಣಳ ಅನಾಮತ್ತು Industrial dispute act ಪ್ರಕಾರ ಕಾನೂನು ಬಾಹಿರವೇ ಆಗುತ್ತದೆ. ಆಕೆ ಕೊನೆಗೆ ಹೈಕೋರ್ಟಿನಿಂದ ತಡೆಯಾಜ್ಞೆ ತಂದು ಕೆಲಸ ಮುಂದುವರಿಸಿದರು. ಇದೇ ರೀತಿಯಲ್ಲಿ ಕಾರ್ಯಕ್ರಮದ ಇನ್ನೂ ಹತ್ತಾರು ನೌಕರರು ಇಂತಹ ಕಿರುಕುಳಕ್ಕೆ ಒಳಗಾಗಿದ್ದು ಹೈಕೋರ್ಟಿನಲ್ಲಿ ದಾವೆ ಸಲ್ಲಿಸಿದ್ದಾರೆ.

### ಸಾಥಿನರ ಸೇವೆಯ ಸ್ಥಿತಿಗತಿ

ಸಾಥಿನರು ಸ್ವಯಂಸೇವಕರಾಗಿದ್ದು ಅವರಿಗೆ ತಿಂಗಳಿಗೆ 200 ರೂಗಳ ಗೌರವ ಧನ ನೀಡಲಾಗುತ್ತದೆ. ಈ ಗೌರವಧನವನ್ನು ಯಾವ ಆಧಾರದ ಮೇಲೆ ನಿರ್ಧಾರ ಮಾಡಲಾಗಿದೆಯೆಂದು ಕಾರ್ಯಕ್ರಮ ಯೋಜನೆಯಲ್ಲಿ ಎಲ್ಲೂ ಹೇಳುವುದಿಲ್ಲ. ಆದರೆ ನಿರ್ದೇಶಕರಿಂದ ಸಾಥಿನರಿಗೆ ಬಂದ ಒಂದು ಪತ್ರದಲ್ಲಿ ಹೀಗೆ ಹೇಳಲಾಗಿದೆ.

"ಸಾಥಿನರು ಹಳ್ಳಿಯ ಬೇರೆ ಯಾವುದೇ ಮಹಿಳೆಯಂತಿರುತ್ತಾರೆ. ಆಕೆ ಸರ್ಕಾರಿ ನೌಕರಳಲ್ಲ. ಸರ್ಕಾರಿ ನೌಕರಳಲ್ಲದೇ ಹೋದರೆ ಆಕೆ 200/-ರೂ ಪಡೆಯುತ್ತಿರುವುದಾದರೂ ಹೇಗೆ ? ಹೇಗೆಂದರೆ ಕೇಳಿ, ಸಾಥಿನರಿಗೆ ದೊರಕುತ್ತಿರುವ ಹಣ ಸಂಬಳವಲ್ಲ. ಅದು ಗೌರವಧನ. ಆಕೆ ತನ್ನ ಕೆಲಸಗಳನ್ನು ಬದಿಗೊತ್ತಿ ತುಂಬಾ ಓಡಾಡಬೇಕಾಗಿರುವುದರಿಂದ ಆಕೆಯ ಖರ್ಚಿಗಾಗಿ ಇದನ್ನು ಕಿಸೆ ಹಣವಾಗಿ ಕೊಡಲಾಗುತ್ತದೆ."

ಈ ಇನ್ನೂರು ರೂಪಾಯಿಗಳ 'ಗೌರವಧನ' ತಮ್ಮ ಅಪಾರಶ್ರಮದ ದುಡಿತಕ್ಕೆ ಏನೇನೂ ಸಾಟಿಯಾಗುವುದಿಲ್ಲವೆಂದು ಸಾಥಿನರು ತುಂಬಾ ಪ್ರತಿಭಟಿಸಿದ್ದಾರೆ. ಬೇರೆ ಬೇರೆ ಮಟ್ಟಗಳಿಗೆ ತಮ್ಮ ಬೇಡಿಕೆಯನ್ನು ಮುಟ್ಟಿಸಿದ್ದಾರೆ. ಬೆಲೆಗಳು ಹೆಚ್ಚಾಗಿರುವುದರಿಂದ, ಹಳ್ಳಿಗಳಿಂದ ಹೊರಗಡೆ ಅನೇಕ ದಿನಗಳು ಉಳಿಯಬೇಕಾಗಿರುವುದರಿಂದ, ತಮ್ಮ ದಿನಗೂಲಿಯ ಕೆಲಸಗಳನ್ನು ಮಾಡಲು ಸಾಧ್ಯವಾಗದೇ ಇರುವುದರಿಂದ, ತಮ್ಮ ದಿನಗೂಲಿಯ ಜಾಗದಲ್ಲಿ ಇತರರನ್ನು ನೇಮಿಸಬೇಕಾಗಿ ಬಂದಿರುವುದರಿಂದ ತಮ್ಮ ಗೌರವಧನವನ್ನು ಹೆಚ್ಚಿಸಬೇಕು ಎಂದು ಒತ್ತಾಯಿಸಿದ್ದಾರೆ. ದಿನಗೂಲಿ ಮತ್ತು ಸಂಬಳಗಳ ಸಂದರ್ಭದಲ್ಲಿ ಯಜಮಾನ-ಕೆಲಸಗಾರ ಸಂಬಂಧ ಇರುವುದರಿಂದಲೂ ಗೌರವಧನಕ್ಕೆ ಸಂಬಂಧಿಸಿದಲ್ಲಿ ಅಂತಹ ಸಂಬಂಧ ಇಲ್ಲದೆ ತಮ್ಮ ಕೆಲಸವನ್ನು ತಾವೇ ನಿರ್ಧರಿಸುವಂತಹ ಅವಕಾಶ ಇರುವುದರಿಂದಲೂ ತಾವು ಗೌರವಧನದಲ್ಲಿಯೇ ಮುಂದುವರೆಯಲು ಇಷ್ಟಪಡುವುದಾಗಿ ಸಾಥಿನರು ಹೇಳಿಕೊಂಡಿದ್ದಾರೆ. ಆದರೆ ಈ ಸಂಬಳ, ಗೌರವಧನಗಳ ವಿಚಾರದಲ್ಲಿ ಇಲ್ಲಿ ತುಂಬಾ ಗೊಂದಲ, ತಿರುಚುವಿಕೆ ಇದೆ. ಕಾರ್ಯಕ್ರಮದ ಅತ್ಯುಚ್ಚ ಸ್ಥಾನದಲ್ಲಿರುವ ಅಧಿಕಾರಿಣಿಯರು 5000-7000ದ ವರೆಗೂ ಸಂಬಳ ಪಡೆಯುತ್ತಾರೆ. ಕಾರ್ಯಕ್ರಮ ಹೇಳಿ

ಕೊಳ್ಳುವ ಸಮಾನತೆ ಮತ್ತು ಸ್ವತಂತ್ರಗಳೇ ಮೌಲ್ಯಗಳಾಗಿರುವುದಾದರೆ ಇದನ್ನೆಲ್ಲಾ ಹೇಗೆ ವಿವರಿಸುವುದು?

### ಮತ್ತದೇ ಕೆಲಸದ ಮೌಲ್ಯಗಳು

ಇಡೀ WDP ಕಾರ್ಯಕ್ರಮ ಹಳ್ಳಿಗಳಲ್ಲಿನ ಸಾಥಿನರು ಮತ್ತು ಪ್ರಚೇತರ ಕೆಲಸದ ಮೇಲೆ ನಿಂತಿದೆ. ಹಾಗಿದ್ದೂ, ಸಾಥಿನರ ಕೆಲಸವನ್ನು **ಕೆಲಸ** ಎಂದು ಪರಿಗಣಿಸದೆ ಪುಡಿಗಾಸಿನ 'ಗೌರವಧನ'ಕ್ಕೆ ಸರಿದೂಗಿಸಲಾಗಿದೆ. ಇನ್ನು ಸಾಥಿನರು ಏನೆಲ್ಲವನ್ನು ಮಾಡಬೇಕೆಂದು ಕಾರ್ಯಯೋಜನೆಯಲ್ಲಿ ಹೇಳಲಾಗಿದೆಯೆಂಬುದು ಕುತೂಹಲಕರ;

* ಹಳ್ಳಿಯ ಮಹಿಳೆಯರೊಂದಿಗಿನ ಸಮಾಲೋಚನೆಯಲ್ಲಿ ಹಳ್ಳಿಗಳಲ್ಲಿ ಮಹಿಳಾ ವಿಕಾಸ ಕೇಂದ್ರಗಳನ್ನು ಕಟ್ಟುವುದು. ಇದಕ್ಕೆ ಪ್ರಚೇತರ ಮಾರ್ಗದರ್ಶನ ಇರುತ್ತದೆ.
* ಹಳ್ಳಿಯ ಮಹಿಳೆಯರೊಂದಿಗೆ ನಿಕಟವಾಗಿ ಕೆಲಸ ಮಾಡುತ್ತ ಅವರ ಮನಗೆದ್ದು ನಂಬಿಕೆ ಬೆಳೆಸುವುದಲ್ಲದೆ, ಬೇಕೆಂದಾಗಲೆಲ್ಲ ಅವರ ಸಹಾಯಕ್ಕೆ ಮುಂದಾಗುವುದು.
* ಹಳ್ಳಿಯ ಬದುಕಿನ ಕಷ್ಟ ಕೋಟಲೆಗಳನ್ನು, ವಿಶೇಷವಾಗಿ ಮಹಿಳೆಯರು ಮತ್ತು ಮಕ್ಕಳ ಸಮಸ್ಯೆಗಳನ್ನು ಅಲ್ಲದೆ ವಿವಿಧ ಹಳ್ಳಿಯ ಸಂಸ್ಥೆಗಳು ಮತ್ತು ಅವುಗಳ ಬಲ - ದೌರ್ಬಲ್ಯಗಳನ್ನು ಪರಿವೀಕ್ಷಿಸಿ, ಅಭ್ಯಸಿಸಿ, ವಿಶ್ಲೇಷಿಸುವುದು.
* ಮಹಿಳೆಯರ ಮತ್ತು ಮಕ್ಕಳ ಸಂಬಂಧದಲ್ಲಿ ಯಾವಾಗೆಂದರಾಗ ಉದ್ಭವಿಸುವ ಸಮಸ್ಯೆಗಳ ತುರ್ತು ಪರಿಹಾರಕ್ಕೆ ನಿಲುವುಗಳನ್ನು ತೆಗೆದುಕೊಳ್ಳುವುದು.
* ತಾನೇ ಸ್ವಂತತ್ರವಾಗಿಯೂ ಅಲ್ಲದೆ ಪ್ರಚೇತರ ಮಾರ್ಗದರ್ಶನ ಪಡೆದೂ WDP ಕಾರ್ಯಕ್ರಮಗಳನ್ನು ನಡೆಸಿಕೊಂಡು ಹೋಗುವುದು.
* ಗ್ರಾಮಪಂಚಾಯತಿ ಪ್ರದೇಶದ ಮಹಿಳೆಯರಿಗೆ **ಸಖಿಯಂತೆ** ಕಾರ್ಯ ನಿರ್ವಹಿಸುವುದು.

ಈ ಎಲ್ಲ ನಿರೀಕ್ಷೆಗಳನ್ನು ತುಂಬಿಕೊಡಬೇಕಾದರೆ ಒಬ್ಬ ಸಾಥಿನಳು ಎಷ್ಟು ಸಮಯ ಕೆಲಸ ಮಾಡಬೇಕಾಗುತ್ತದೆಯೆನ್ನುವುದನ್ನು ಅಳೆಯಲು ಯಾವುದೇ ಮಾಪಕಗಳಿಲ್ಲ. ಅಲ್ಲದೆ ಅವಳ ಕೆಲಸದ ಫಲವನ್ನು ಅಳೆಯುವುದೂ ಸಾಧ್ಯವಿಲ್ಲ ಏಕೆಂದರೆ ಅದು ಮುಖ್ಯವಾಗಿ, ಹಳ್ಳಿಯ ಮಹಿಳೆಯರಲ್ಲಿ ಎಷ್ಟು ಆತ್ಮವಿಶ್ವಾಸ ಬಂದಿದೆ; ಕುಟುಂಬ, ಹಳ್ಳಿಗಳಲ್ಲಿ ತಮ್ಮ ಸ್ಥಿತಿಗತಿ ಬದಲಾದಂತೆ ಅವರೆಷ್ಟು ಭಾವಿಸಿಕೊಳ್ಳುತ್ತಾರೆ ಎಂಬಂತಹ ಅಂಶಗಳಿಗೆ ಸಂಬಂಧಿಸಿರುತ್ತದೆ. ಕಾರ್ಯಕ್ರಮ ಈ ಅಂಶದ ಲಾಭ ಪಡೆಯಲಿಕ್ಕಾಗಿಯೇ ರೂಪಿತಗೊಂಡಿದೆ. ಶ್ರೀಮತಿ ಶಾರದಾ ಜೈನ್ 23-3-91ರ ಸಮ್ಮೊಂದಿಗಿನ ಚರ್ಚೆಯಲ್ಲಿ ಹೇಳುವಂತೆ "ಅಂಗನವಾಡಿ ಕಾರ್ಯಕರ್ತೆಯರಿಗೂ ಸಾಥಿನರಿಗೂ ನಡುವೆ ಸಾಮ್ಯ ತರಲು ಸಾಧ್ಯವಿಲ್ಲ. ಅಂಗನವಾಡಿ ಕಾರ್ಯಕರ್ತೆಯರಿಗೆ ಅವರ ಕೆಲಸದ ವ್ಯಾಖ್ಯೆ-ವಿವರಣೆ ಇರುತ್ತದೆ. ಸಾಥಿನರಿಗೆ ಅದು ಇರುವುದಿಲ್ಲ." ಇದೇನೂ ನಮಗೆ ಹೊಸತಲ್ಲ. ಚಾರಿತ್ರಿಕವಾಗಿಯೇ ಮಹಿಳೆಯ ಕೆಲಸವನ್ನು ಕೆಲಸವೆಂದು ಪರಿಗಣಿಸದೇ ಹೋಗಿರುವುದು ಗೊತ್ತಿಲ್ಲವೇ !

**ಹಳ್ಳಿಯ ಬಡ ಮತ್ತು ಹಿಂದುಳಿದ ಮಹಿಳೆಯರ ಸಶಕ್ತತೆಯನ್ನು ಆದ್ಯ ಗುರಿಯನ್ನಾಗಿ ಹೊಂದಿರುವ ಕಾರ್ಯಕ್ರಮವೊಂದು, ತನ್ನ ಮಹಿಳಾ ಕೆಲಸಗಾರರ ಕೆಲಸವನ್ನು ಕೆಲಸವೆಂದು ವ್ಯಾಖ್ಯಿಸದೆ, ತಕ್ಕ ಮೌಲ್ಯವನ್ನು ನೀಡದೆ ಶೋಷಿಸಲು ಹೇಗೆ ಸಾಧ್ಯ ?**

### ಸೇವೆಯ ವಜಾಗೊಳಿಸುವಿಕೆ

WDPಯ ಕಾರ್ಯಯೋಜನೆಯಲ್ಲಿ, ಸರ್ಕಾರೀ ನೌಕರಳಲ್ಲದ ಸಾಥಿನಳನ್ನು ಸೇವೆಯಿಂದ ವಜಾ ಮಾಡುವುದರ ಬಗ್ಗೆ ದೀರ್ಘವಾಗಿಯೇ ಚರ್ಚಿಸಲಾಗಿದೆ. ಸಾಥಿನರ ವಾರ್ತಾಪತ್ರದಲ್ಲಿ ಹೇಳಿರುವಂತೆ "ಹಳ್ಳಿಯ ಮಹಿಳೆಯರು ಸಾಥಿನಳಲ್ಲಿ ನಂಬಿಕೆ ಕಳೆದುಕೊಂಡು ಆಕೆಯಿನ್ನು ಕೆಲಸವನ್ನೇ ಮಾಡಲಾರಳು ಎಂಬ ಅಭಿಪ್ರಾಯಕ್ಕೆ ಬಂದರೆ ಆಕೆಯನ್ನು ತೆಗೆಯಬಹುದು" ವಜಾ ಮಾಡುವುದಕ್ಕೆ ಮುನ್ನಾ ಎಲ್ಲ ಸಾಥಿನರ ಸಭೆಯಲ್ಲಿ ಇದನ್ನು ಮುಕ್ತವಾಗಿ ಚರ್ಚಿಸಬೇಕು. ಆ ನಂತರ ಇತರ ಸಾಥಿನರು ಮತ್ತು ಪ್ರಚೇತ ಸಂಬಂಧಪಟ್ಟ ಸಾಥಿನಳ ಹಳ್ಳಿಗೆ ಹೋಗಿ ಹೆಂಗಸರ ಜತೆ ಮಾತನಾಡಬೇಕು. ಅನಂತರ ಪುನಃ ಪ್ರಚೇತರ ಸಭೆಯಲ್ಲಿ ಇದನ್ನು ಚರ್ಚಿಸಿ ನಂತರ ಅಂತಿಮ ನಿರ್ಧಾರ ತೆಗೆದುಕೊಳ್ಳಬೇಕು.

ಹಳ್ಳಿಯಲ್ಲಿ ಮುಕ್ತ ಸಭೆ ಕರೆದು ಪ್ರತಿಯೊಬ್ಬರ ಅಭಿಪ್ರಾಯ ಪಡೆಯಬೇಕು. ಅಲ್ಲಿಯೂ ಸಾಥಿನಳು ತನ್ನ ಕೆಲಸವನ್ನು ಸುಧಾರಿಸಿಕೊಳ್ಳಲೇ ಆರಳು ಎಂಬ ಅಭಿಪ್ರಾಯ ಬಂದಾಗ ಮಾತ್ರ ತೆಗೆಯಬೇಕು.

ಆದರೆ ಈ ಹಿಂದೆ ಹೇಳಿದ ಪ್ರದೇಶದ ಸಾಥಿನರನ್ನು ಅನಾಮತ್ತುಗೊಳಿಸುವಾಗ ಇದ್ಯಾವುದೇ ಅಂಶಗಳನ್ನು ಪಾಲಿಸಲಾಗಿಲ್ಲ. ಸಾಥಿನರು ಕ್ಯಾಲಿಕಟ್ ಸಮಾವೇಶ ದಿಂದ ಹಿಂದಿರುಗಿದ ತಕ್ಷಣ ಜಿಲ್ಲಾ ಸಂಯೋಜಕಿ ಮೂವರು ಪ್ರಚೇತರು ಸೇರಿ ಅವರನ್ನು ಏಕಾಏಕೀ ಜಿಲ್ಲಾ ಕಚೇರಿಗೆ ಕೊಂಡೊಯ್ದು ಸರಿಯಾಗಿ ಬೆದರಿಸಿ, ಕಿರುಕುಳ ಕೊಟ್ಟು ತಮ್ಮದೇ ಬ್ಯಾನರಿನಡಿ ಪ್ರತ್ಯೇಕವಾಗಿ ಭಾಗ ವಹಿಸಿದ ಸಾಥಿನಳನ್ನು ತೆಗೆದುಹಾಕಬೇಕೆಂದು ಅವರ ಗೈರುಹಾಜರಿಯಲ್ಲಿ ನಡೆದ ಸಭೆಯಲ್ಲಿ ತೀರ್ಮಾನಿಸ ಲಾಯಿತು.

## ಉಪಸಂಹಾರ

ರಾಜಸ್ತಾನದ ಸರ್ಕಾರೀ ಪ್ರೋತ್ಸಾಹಿತ ಮಹಿಳಾ ಅಭಿವೃದ್ಧಿ ಕಾರ್ಯಕ್ರಮವನ್ನು ಕುರಿತ ಟೀಕೆಯನ್ನು ಕ್ರೋಢೀಕರಿಸುತ್ತಾ ನಾವು ಎರಡು ಹಂತಗಳಲ್ಲಿ ಪ್ರಶ್ನೆ ಗಳನ್ನು ಎತ್ತಬಯಸುತ್ತೇವೆ. ಮೊದಲನೆಯದು ಕಾರ್ಯ ಕ್ರಮದಲ್ಲಿ ಕೆಲಸ ಮಾಡುವವರ ಸೇವೆಯ ಸ್ಥಿತಿಗತಿ ಸಂಬಂಧಿಸಿದಂತದ್ದು ಮತ್ತು ಇನ್ನೊಂದು ಇಂತಹ ಸರ್ಕಾರೀ ಕಾರ್ಯಕ್ರಮದೊಂದಿಗೆ ಅಥವಾ ಸಹಯೋಗ ದಲ್ಲಿ ಕೆಲಸ ಮಾಡುವಾಗ ಉಂಟಾಗುವ ವೈರುಧ್ಯಗಳು.

### 1. WDP ಕೆಲಸಗಾರರ ಸೇವೆಯ ಸ್ಥಿತಿಗತಿ

ಲಭ್ಯವಿದ್ದ ಮೂಲಗಳಿಂದೆಲ್ಲಾ ಸಂಗ್ರಹಿಸಿದ ಮಾಹಿತಿಯ ಪ್ರಕಾರ ಸಾಥಿನರ ಮತ್ತು ಪ್ರಚೇತಳ ವಜಾ ಸಂಪೂರ್ಣ ನ್ಯಾಯಸಮ್ಮತವಲ್ಲದಾಗಿದ್ದು ಕಾರ್ಯಕ್ರಮ ಹೇಳಿ ಕೊಳ್ಳುವ ಮಹಿಳಾ ಸಶಕ್ತತೆ ಮತ್ತು ಸಾಮಾಜಿಕ ಅನ್ಯಾಯದ ವಿರುದ್ಧ ಹೋರಾಟ ಮುಂತಾದ ಅಂಶ ಗಳೊಂದಿಗೆ ಹಾಸ್ಯಾಸ್ಪದ ರೀತಿಯಲ್ಲಿ ಸಂಘರ್ಷಿಸುತ್ತದೆ. ಇಂತಹ ಸ್ವೇಚ್ಛಾನುಸಾರ ವಜಾ, ಅನಾಮತ್ತುಗಳು WDPಯಲ್ಲಿ ಸಾಕಷ್ಟು ನಡೆದಿದ್ದರೂ ಕೆಲಸಗಾರರು ಪ್ರತಿಭಟಿಸುತ್ತಿರುವುದು ಇದೇ ಮೊದಲು.

ಮಹಿಳಾ ಅಭಿವೃದ್ಧಿ ಕಾರ್ಯಕ್ರಮವನ್ನು ಸರ್ಕಾರೀ ಸಂಸ್ಥೆಯೆಂದು ಗುರುತಿಸಬೇಕಾದ ತುರ್ತಿನ ಅವಶ್ಯಕತೆ ಇದೆ. ಇಲ್ಲಿ ಕೆಲಸ ಮಾಡುವ ಪ್ರತಿಯೊಬ್ಬರಿಗೂ ಕೊನೇ ಪಕ್ಷ ಕನಿಷ್ಟ ಕೂಲಿಯನ್ನಾದರೂ ಕೊಡಬೇಕು ಮತ್ತು ಕಾನೂನುಬದ್ಧ ಕಟ್ಟಳೆಗಳಿರಬೇಕು. ನೇಮಕಾತಿ, ವಜಾ ಗಳು ಕಾನೂನು ರೀತ್ಯ ನಡೆಯಬೇಕು. ಕೆಲಸಗಾರರನ್ನು ಸ್ವಯಂಸೇವಕರೆಂದು ಕರೆಯುತ್ತಾ ಶೋಷಣಾತ್ಮಕ ಕೆಲಸದ ಸ್ಥಿತಿಗತಿಯನ್ನು ಮರೆಮಾಚುವ ಮತ್ತು ಅತಿ ಕಡಿಮೆ ಹಣ ನೀಡುವ ನೀತಿ ಕೊನೆಗಾಣಬೇಕು.

ಮಹಿಳೆಯ ದುಡಿತ ಕೆಲಸವೆಂದು ಪರಿಗಣಿತವಾಗದಿರು ವುದರ ಬಗ್ಗೆ ನಮಗೆ ಅರಿವಿದೆ ಮತ್ತು ಮಹಿಳೆಯ ಕೆಲಸಕ್ಕೆ ಮನ್ನಣೆ ಸಿಗಬೇಕೆಂದು ನಾವೆಲ್ಲ ಹೋರಾಡುತ್ತಾ ಬಂದಿದ್ದೇವೆ. WDPಯಲ್ಲಿ ಮಹಿಳೆಯ ಕೆಲಸ ಅಪ ಮೌಲ್ಯಕ್ಕೊಳಗಾಗುತ್ತಿರುವುದನ್ನು ಕುರಿತು ವ್ಯವಸ್ಥಿತ ಹೋರಾಟ ನಡೆಸಬೇಕಿದೆ, ವಿಶೇಷವಾಗಿ ಕೆಲಸದ ಬೆನ್ನೆಲು ಬಾಗಿರುವ ಅತ್ಯಂತ ಕೆಳಮಟ್ಟದ ಕೆಲಸಗಾರರ ಸಂಬಂಧ ದಲ್ಲಿ.

### 2. ಸರ್ಕಾರದ ಜತೆಗಿನ ಸಹಯೋಗದಿಂದ ಉದ್ಭವಿಸುವ ವೈರುಧ್ಯಗಳು

"ಹಳ್ಳಿಯ ಮಹಿಳೆಯರು ಅಭಿವೃದ್ಧಿ ಪ್ರಕ್ರಿಯೆಯ ಸಕ್ರಿಯ ಪಾಲುದಾರರಂತೆ ಭಾವಿಸಿಕೊಳ್ಳಲು ಸಾಧ್ಯ ವಾಗುವಂತಹ ವಾತಾವರಣ ಸೃಷ್ಟಿಸುವುದು" WDPಯ ಮೂಲತತ್ವ. ಯಾವುದೇ ಪ್ರಜೆ, ಸರ್ಕಾರ ಯೋಜಿಸಿದ "ಅಭಿವೃದ್ಧಿ ಕಾರ್ಯಕ್ರಮ"ಕ್ಕೆ ಪರಿಣಾಮಕಾರಿಯಾಗಿ, ಕ್ರಿಯಾಶೀಲವಾಗಿ ಒತ್ತಾಸೆಯಾಗಿರಲು ಸಾಧ್ಯ ಎಂಬುದು ಇಂತಹ ಗ್ರಹಿಕೆಯ ಹಿಂದಿರುವ ಅಭಿಪ್ರಾಯ. ಸರ್ಕಾರ ಮತ್ತು ಜನರಿಬ್ಬರಿಗೂ ಅಭಿವೃದ್ಧಿಯೆನ್ನುವುದರ ಗ್ರಹಿಕೆ ಒಂದೇ ಆಗಿರುತ್ತದೆ ಎಂದು ಇದು ಭಾವಿಸುತ್ತದೆ.

ಕಳೆದ ಕೆಲವು ವರ್ಷಗಳಿಂದಲೂ, ಪ್ರಗತಿಪರ ಭಾಷೆ ಯನ್ನು, ವಿವಿಧ ಜನಪರ ಚಳವಳಿಗಳ ಪರಿಭಾಷಿಕ ಗಳನ್ನು, ಸಂಕೇತಗಳನ್ನು ಸರ್ಕಾರವು ಯೋಜನೆಗಳಲ್ಲಿ, ಕಾರ್ಯಕ್ರಮಗಳ ಅನುಷ್ಠಾನದಲ್ಲಿ ಹೇರಳವಾಗಿ ಬಳಸಿ ಕೊಳ್ಳುತ್ತಾ ಬಂದಿದೆ. ಸರ್ಕಾರದ ಯೋಜನೆಗಳನ್ನು, ಅಭಿವೃದ್ಧಿಯನ್ನು ಕುರಿತ ಸರ್ಕಾರದ ವ್ಯಾಖ್ಯೆಯನ್ನು ಜನ ಒಪ್ಪಿಕೊಳ್ಳುವಂತೆ ಮಾಡುವುದು ಇಲ್ಲಿನ ಪ್ರಯತ್ನ. WDP ಅಂತಹ ಒಂದು ಪ್ರಯತ್ನವೇ ಆಗಿದೆ.

ಮಹಿಳಾ ಅಭಿವೃದ್ಧಿ ಕಾರ್ಯಕ್ರಮ ಹಮ್ಮಿಕೊಂಡಿ

ರುವ ಮೂರು ಮುಖ್ಯ ಆಂದೋಲನಗಳಾದ 1. ವಯಸ್ಕರ ಶಿಕ್ಷಣ (ವಯಸ್ಕರ ಮಹಿಳೆಯರಿಗೆ ಆದ್ಯತೆ) ; 2. ಬಾಲ್ಯವಿವಾಹ ವಿರೋಧೀ ಆಂದೋಲನ ಮತ್ತು 3. ಕುಟುಂಬಯೋಜನಾ ಕಾರ್ಯಕ್ರಮಗಳು, ಸರ್ಕಾರ ಮಾತ್ರವಲ್ಲ ಇದಕ್ಕೆ ಹಣ ಸಹಾಯ ನೀಡುತ್ತಿರುವ UNICEF ನಂತಹ ಅಂತರರಾಷ್ಟ್ರೀಯ ದತ್ತಿ ಸಂಸ್ಥೆಗಳ ಅಭಿವೃದ್ಧಿ ಸಂಬಂಧೀ ಕಾಳಜಿಗಳು ಆದರ ಪರಿಣಾಮ ಅನುಭವಿಸುವ ಜನರ ಕಾಳಜಿಗಳಿಗಿಂತ ಹೇಗೆ ಭಿನ್ನವಾದುವು ಎಂಬುದನ್ನು ತೋರಿಸುತ್ತದೆ. ಮೂರನೇ ವಿಶ್ವ ರಾಷ್ಟ್ರಗಳ ಜನಸಂಖ್ಯೆಯ ನಿಯಂತ್ರಣ ಇಂಥಾ ಅಂತರರಾಷ್ಟ್ರೀಯ ಏಜೆನ್ಸಿಗಳ ಬಹುಮುಖ್ಯ ಅಜೆಂಡಾ ಆಗಿದೆ. ಈವರೆಗೂ ಸರ್ಕಾರ ತನ್ನ ಜನಸಂಖ್ಯಾ ಪಾಲಿಸಿಗಳನ್ನು ಯಶಸ್ವಿಯಾಗಿ ಅನುಷ್ಠಾನಗೊಳಿಸಿದ್ದಿಲ್ಲ. ಈಗ ಸಮುದಾಯವನ್ನು ಒಳಗೊಳ್ಳಿಸಿಕೊಳ್ಳುವಂತಹ WDP ಯಂತಹ ಕಾರ್ಯಕ್ರಮಗಳು ಹೊಸ ಹಾದಿ ತೆರೆದಂತಿವೆ. ಸರ್ಕಾರದ ದರ್ಶನಗಳನ್ನು, ಉದ್ದೇಶಗಳನ್ನು ಹಳ್ಳಿಗಳಿಗೆ ಮತ್ತು ಕುಟುಂಬಗಳಿಗೆ ಕೊಂಡೊಯ್ಯುವ ಸರ್ಕಾರೀ ವಿಸ್ತರಣಾ ಅಂಗದಂತೆ WDP ಕೆಲಸ ಮಾಡಿರುವುದು ಸ್ಪಷ್ಟವಾಗುತ್ತದೆ. ಸರ್ಕಾರದ ಬಗ್ಗೆ ಜನರಲ್ಲಿ ಇರುವ ಅಪನಂಬಿಕೆಯನ್ನು ಹೋಗಗೊಡಿಸಿ, ಎಲ್ಲೆಲ್ಲಿ ಸರ್ಕಾರ ತನ್ನ ಹಿಡಿತ ಸ್ಥಾಪಿಸುವಲ್ಲಿ ಸೋತಿದ್ದಿತೋ ಅಲ್ಲೆಲ್ಲಾ ಅದನ್ನು ಯಶಸ್ವಿಗೊಳಿಸುವಲ್ಲಿ WDP ಸಹಾಯವಾಗಿದೆ. ಪ್ರಗತಿಪರ ಭಾಷೆಯಡಿಯಲ್ಲಿ ಅಡಗಿರುವ ಪ್ರೇರಣಾ ಶಕ್ತಿಯೇ ಇದಕ್ಕೆ ಕಾರಣವಿರಬಹುದು.

ರಾಜಸ್ತಾನದ ಮಹಿಳಾ ಅಭಿವೃದ್ಧಿ ಕಾರ್ಯಕ್ರಮವೇ ಇಡೀ ದೇಶಕ್ಕೆ ಮುಂದೆ ಮಹಿಳಾ ಅಭಿವೃದ್ಧಿ ಕಾರ್ಯಕ್ರಮಕ್ಕೆ ಮಾದರಿಯಾಗಬಹುದಾದ ಎಲ್ಲ ಸಾಧ್ಯತೆಗಳಿರುವಾಗ ಇಲ್ಲಿನ ಕಾಳಜಿಗಳನ್ನು ಚರ್ಚಿಸಬೇಕಾದುದು ಮುಖ್ಯವಾಗುತ್ತದೆ. ಸಾಥಿನರ ಮತ್ತು ಪ್ರಚೇತಳ ವಜಾದಿಂದ ಎದ್ದ ಪ್ರಶ್ನೆಗಳನ್ನು ಚರ್ಚಿಸುತ್ತಲೇ ಇಂತಹ ಕಾರ್ಯಕ್ರಮಗಳ ಸಂಬಂಧದಲ್ಲಿ ಒಳಗೊಂಡಿರುವ ವಿಸ್ತಾರ ಸಮಸ್ಯೆಗಳನ್ನು ಚರ್ಚೆಯ ರಂಗಕ್ಕೆ ತರುವುದು ಈ ವರದಿಯ ಉದ್ದೇಶ.

## ಕೆಲವು ಚರ್ಚಾರ್ಹ ಪ್ರಶ್ನೆಗಳು

### A. ರಾಜ್ಯ ವ್ಯವಸ್ಥೆಯ ಸ್ವರೂಪ ಮತ್ತು ಮಹಿಳಾ ಅಭಿವೃದ್ಧಿಯಲ್ಲಿ ಅದರ ಪಾತ್ರ.

ಕಲ್ಯಾಣ ರಾಜ್ಯವಾಗಿ ಸರ್ಕಾರಕ್ಕೆ ಮಹಿಳೆಯರನ್ನು ಒಳಗೊಂಡಂತೆ ತನ್ನ ಇಡೀ ಜನಸಮೂಹದ ಅಭಿವೃದ್ಧಿಗೆ ಬೇಕಾದ ಸಂಪನ್ಮೂಲವನ್ನು ಭದ್ರಪಡಿಸುವ ಜವಾಬ್ದಾರಿ ಇರುತ್ತದೆ. ಆದರೆ ಮಹಿಳೆಯರ ಸಂಬಂಧದಲ್ಲಿ ಅದು ಸಂಪನ್ಮೂಲ ಹಂಚಿಕೆ, ಪಾಲಿಸಿ ಕ್ರಮಗಳು ಅಥವಾ ಅಭಿವೃದ್ಧಿಯ ಮರು ವಾಖ್ಯೆಗಳ ಭಾಷೆಯಲ್ಲಿ ಮಾತನಾಡದೆ ಅರಿವಿನ ಜಾಗೃತಿ, ಸಂಘಟನೆ ಮತ್ತು ಸನ್ನದ್ಧಗೊಳಿಸುವಿಕೆಯ ಭಾಷೆಯಲ್ಲಿ ಮಾತನಾಡುತ್ತದೆ.

1. ಮಹಿಳೆಯ ಅಭಿವೃದ್ಧಿಯೆನ್ನುವುದನ್ನು ಸರ್ಕಾರ ಏಕೆ ಅರಿವಿನ ಜಾಗೃತಿ ಮತ್ತು ಸಂಘಟನೆಯ ರೂಪದಲ್ಲಿ ನೋಡುತ್ತದೆ ? ಬೇರೆ ದಮನಕ್ಕೊಳಗಾದ ವರ್ಗಗಳಿಗೆ ಸೇರಿದಂತೆ ಇವತ್ತಿಗೂ ಇಂತಹ ಆಯಾಮಗಳೇಕಿಲ್ಲ ?

2. WDPಗಳು, ಮಹಿಳಾ ಸಮಖ್ಯಾಗಳು ಸರ್ಕಾರದ ಪ್ರಚಾರೀ ಅಂಗಗಳಾಗುವುದಕ್ಕಿಂತಲೂ ಹೆಚ್ಚು ದೂರ ಕ್ರಮಿಸಬಲ್ಲುವೇ ?

3. ಮಹಿಳೆಯರ ಹೋರಾಟ ಕೇವಲ ಕುಟುಂಬಕ್ಕಷ್ಟೇ ಅಲ್ಲ ಅದಕ್ಕೂ ದೊಡ್ಡ ರೀತಿಯಲ್ಲಿ ಸಮಾಜಗಳ ಮಟ್ಟದಲ್ಲಿ, ಅಭಿವೃದ್ಧಿಯ ಮಟ್ಟದಲ್ಲಿ ಉದ್ಭವಿಸುವ ಸಮಸ್ಯೆಗಳಿಗೆ ಸಂಬಂಧ ಹೊಂದಿರುತ್ತದೆಂಬುದನ್ನು ಗುರ್ತಿಸಿದ ಹೋರಾಟದಲ್ಲಿ ಸರ್ಕಾರಕ್ಕೇನಾದರೂ ಪಾತ್ರ ಇದೆಯೇ ?

4. ಸರ್ಕಾರವು ಮಹಿಳೆಯರ ಸಂಘಟನೆಯನ್ನು ಕೈಗೆತ್ತಿಕೊಂಡಾಗ, ಸಂಘಟನಾ ಸಾಮರ್ಥ್ಯ ತಲೆಗಳಗಾಗುವುದಿಲ್ಲವೇ? ಮಹಿಳೆಯರ ನಿಜಾರ್ಥದ ರಾಜಕೀಯಕರಣ (Politicisation) ಸರ್ಕಾರ ಉತ್ತರಿಸಲು ಸಾಧ್ಯವಾಗದಂತಹ ಅನೇಕಾನೇಕ ಪ್ರಶ್ನೆಗಳನ್ನು ಎತ್ತುತ್ತದೆನ್ನುವುದನ್ನು ಗಮನದಲ್ಲಿರಿಸಿದಾಗ, ಸರ್ಕಾರವು ಅರಾಜಕೀಯಗೊಳಿಸುವ ಶಕ್ತಿಯಾಗಿ ಕೆಲಸ ಮಾಡುವುದಿಲ್ಲವೇ ?

### B. ಮಹಿಳಾ ಚಳವಳಿ ಮತ್ತು ಸರ್ಕಾರೀ ಪೋಷಿತ ಮಹಿಳಾ ಅಭಿವೃದ್ಧಿ

ಸರ್ಕಾರೇತರ ಸಂಸ್ಥೆಗಳು (NGOs) ಸರ್ಕಾರೀ ಕಾರ್ಯಕ್ರಮಗಳನ್ನು ಕೈಗೆತ್ತಿಕೊಳ್ಳುತ್ತಿರುವುದು ಬಹುಕಾಲದ ಕತೆಯಾದರೆ, ಮಹಿಳಾ ಕಾರ್ಯಕರ್ತೆಯರು ನೇರ

ಸರ್ಕಾರಿ ಕಾರ್ಯಕ್ರಮಗಳೊಳಗೆ ಇಳಿಯುತ್ತಿರುವುದು ಇತ್ತೀಚಿನ ಬೆಳವಣಿಗೆ. ಅನೇಕಾನೇಕ ಹೆಂಗಸರನ್ನು ತಲುಪುವ ಸಾಧ್ಯತೆ ಅನೇಕ ಕಾರ್ಯಕರ್ತೆಯರನ್ನು ಆಕರ್ಷಿಸಿದ್ದರೆ, ಕಾರ್ಯಕರ್ತೆಯರ ಪ್ರವೇಶದಿಂದ ಇಂತಹ ಕಾರ್ಯಕ್ರಮಗಳಿಗೆ ಬೇಕಾದ ನ್ಯಾಯೋಚಿತತೆ ದೊರಕಿದೆ. ಈ ನೇರ ಸಹ ಭಾಗಿತ್ವದ ಪರಿಣಾಮ ದೊಡ್ಡದೇ.

1. ರಾಜ್ಯವು ತನ್ನ ಮತ್ತು ಜನರ ಆಸಕ್ತಿಗಳ ನಡುವಿನ ವೈರುದ್ಧ್ಯವನ್ನು ಮಂಕುಗೊಳಿಸಲು ಪ್ರಜ್ಞಾಪೂರ್ವಕವಾಗಿಯೇ ಪ್ರಗತಿಪರ ಸಂಕೇತಗಳು ಮತ್ತು ಪರಿಭಾಷೆಗಳನ್ನು ಆರಿಸಿಕೊಂಡಿದೆಯೇ ?
2. ಸರ್ಕಾರದೊಂದಿಗಿದ್ದುಕೊಂಡೇ ಅಂತಹ ಕಾರ್ಯಕ್ರಮಗಳನ್ನು ತಮ್ಮ ಸಿದ್ಧಾಂತಗಳಿಂದ ಪ್ರಭಾವಿಸಬಹುದೆಂದು ಸಂಬಂಧಪಟ್ಟ ಕಾರ್ಯಕರ್ತೆಯರು ಭಾವಿಸಿಕೊಂಡಿದ್ದಾರೆಯೇ ?
3. ಇಂತಹ ಪ್ರಭಾವ ಎರಡೂ ರೀತಿಯಲ್ಲೂ ಕೆಲಸ ಮಾಡುವುದಿಲ್ಲವೇ ? 'ಕಾರ್ಯಕ್ರಮದ ಹಿತಾಸಕ್ತಿ' ಯಲ್ಲಿ ಕಾರ್ಯಕರ್ತೆಯರ ನಿಲುವುಗಳು ಸಡಿಲಗೊಳ್ಳಲಾರದೇ? ಉದಾ: WDPಯ ಆರೋಗ್ಯ ಯೋಜನೆಯಲ್ಲಿ ಲೈಂಗಿಕತೆಯನ್ನು ಫಲಶಕ್ತಿಯಿಂದ ಪ್ರತ್ಯೇಕಗೊಳಿಸಿ, ಫಲಶಕ್ತಿಯೊಂದನ್ನೇ ಗಣನೆಗೆ ತಂದುಕೊಳ್ಳುವಂತಹ ಧೋರಣೆ ಇವೆರಡನ್ನೂ ಬೆಸೆಯುವ ಯಾವತ್ತೂ ಸ್ತ್ರೀವಾದೀ ಧೋರಣೆಗೆ ನೇರವಾಗಿ ವೈರುದ್ಧ್ಯ ಹೊಂದಿರುತ್ತದೆ.
4. ವರ್ಗ ಪ್ರಶ್ನೆಯನ್ನು ಲಿಂಗ ಪ್ರಶ್ನೆಯೊಂದಿಗೆ ಸೇರಿಸಿಬಿಟ್ಟು, ಸಮಾಜದಲ್ಲಿನ ಬಹುಮುಖ್ಯ ವೈರುದ್ಧ್ಯಗಳೆಡೆಯಿಂದ ಗಮನವನ್ನು ಸೆಳೆದು ಬಿಡುವ ಆಳುವ ವರ್ಗದ ಹಿತಾಸಕ್ತಿಯಲ್ಲವೇ ಇದು ?

## C. ಮಹಿಳಾ ಅಭಿವೃದ್ಧಿಯ ಬಹುರಾಷ್ಟ್ರೀಯ ಪೋಷಣೆ

ಮಹಿಳಾ ದಶಕದಿಂದಲಾಗಾಯ್ತು, ಅನೇಕ ಮೂಲಗಳಿಂದ ಮಹಿಳಾ ಅಭಿವೃದ್ಧಿಗೆ ಫಂಡುಗಳು ಸುರಿದು ಬರುತ್ತಿವೆ. ಇಲ್ಲಿನ ಆಸಕ್ತಿ ಅವಶ್ಯಕವಾಗಿ ಜನಪರವಾಗಲಿ ಮಹಿಳಾ ಪರವಾಗಲೀ ಆಗಬೇಕಾದೇನಿಲ್ಲ. ಈ ಫಂಡುಗಳು ಕಾರ್ಯಕರ್ತರನ್ನು, ಸ್ವಯಂಸೇವಾ ಸಂಸ್ಥೆಗಳನ್ನು ಮತ್ತು ಸರ್ಕಾರೀ ಕಾರ್ಯಕ್ರಮಗಳನ್ನು ಬೆಂಬಲಿಸಲು ಹೆಚ್ಚುಹೆಚ್ಚು ಬಳಕೆಯಾಗುತ್ತಿವೆ. ಪಶ್ಚಿಮದಲ್ಲಿ ಮಹಿಳಾ ಚಳವಳಿಯ ಬೆಳವಣಿಗೆಯಿಂದಾಗಿ ಇಂತಹ ಬೆಂಬಲ ಲಭ್ಯವಾಗುತ್ತಿದೆಯೆಂಬುದು ತುಂಬಾ ಅನುಕೂಲಕರ ವಿವರಣೆ. ದಶಕದ ಹಿಂದೆ ಇದು ನಿಜವಿದ್ದಿರಬಹುದಾದರೂ, ಇಂದು ಫಂಡುಗಳ ನಿರಂತರ ಹರಿಯುವಿಕೆಯನ್ನು ಇದು ವಿವರಿಸಲಾರದು.

ಮಹಿಳಾ ಚಳವಳಿಯೊಳಗಡೆಯೇ, ಫಂಡುಗಳನ್ನು ತೆಗೆದುಕೊಳ್ಳುವ ಮತ್ತು ತೆಗೆದುಕೊಳ್ಳದ ಗುಂಪುಗಳ ನಡುವೆ ಆಗಿಂದಾಗ್ಗೆ ಬಿಸಿ ವಾಗ್ವಾದಗಳು ನಡೆಯುತ್ತಲೇ ಇವೆ. ಹಾಗೆಯೇ ಕೆಲವು ಪ್ರಶ್ನೆಗಳನ್ನು ಅರ್ಥಮಾಡಿಕೊಳ್ಳಬೇಕಾದ ಅವಶ್ಯಕತೆ.

1. ದತ್ತಿ ಸಂಸ್ಥೆಗಳು (Funding agencies) ಮಹಿಳಾ ಗುಂಪುಗಳಿಗೆ ಕೊನೆಯಿಲ್ಲದ ಬೆಂಬಲ ಏಕೆ ನೀಡುತ್ತಿವೆ ?
2. ಮಹಿಳೆಯರ ಅಭಿವೃದ್ಧಿಯ ಸಂಬಂಧದಲ್ಲಿ ಮಾತ್ರ ಅರಿವಿನ ಜಾಗೃತಿ, ಸಂಘಟನೆಗಳಿಗೆ ಒತ್ತು ಏಕೆ ?
3. ಮೊದಲನೇ ಮತ್ತು ಮೂರನೇ ವಿಶ್ವರಾಷ್ಟ್ರಗಳ ಸ್ತ್ರೀವಾದೀಗಳ ನಡುವಿನ ಸಂಬಂಧವೇನು ? ಸಮಸ್ಯೆಗಳು ಮತ್ತು ಆದ್ಯತೆಗಳ ಮೇಲೆ ಪ್ರಭಾವ ತರುವ ಏನಾದರೂ ಪ್ರಯತ್ನಗಳಿವೆಯೇ ?
4. ದತ್ತಿ ಸಂಸ್ಥೆಗಳಲ್ಲಿ, ಅಭಿವೃದ್ಧಿಯಲ್ಲಿ ಮಹಿಳೆಯನ್ನುವುದು ಜನಸಂಖ್ಯಾ ನಿಯಂತ್ರಣಕ್ಕೆ ಸಂಬಂದಿಸಿರುವುದಾದರೂ ಹೇಗೆ, ಸೈದ್ಧಾಂತಿಕ ಮತ್ತು ಕಾರ್ಯಕ್ರಮಗಳೆರಡರ ಸಂಬಂಧದಲ್ಲೂ ?

## D. ಮಹಿಳಾ ಚಳವಳಿಯ ಮುಂದಿರುವ ಪ್ರಶ್ನೆಗಳು

ಚಳವಳಿಯ ಮುನ್ನಡೆಗಾಗಿ ಸರ್ಕಾರದೊಂದಿಗೆ ಸಹಯೋಗ ಬೆಳೆಸುವುದು ಕೆಲವು ಸಂಸ್ಥೆಗಳಿಗೆ ಮತ್ತು ಕಾರ್ಯಕರ್ತೆಯರಿಗೆ ಸ್ಪಷ್ಟವಾದ ಆಯ್ಕೆಯಾಗಿದೆ. ಯಾವುದೇ ಚಳವಳಿ ಪ್ರತ್ಯೇಕೀಕರಣದಿಂದ ಹೇಗೆ ಬೆಳೆಯಲು ಸಾಧ್ಯವಿಲ್ಲವೋ ಹಾಗೆಯೇ ಸ್ಪಷ್ಟವಾಗಿ ಹೇಳಲ್ಪಟ್ಟ ಸಿದ್ಧಾಂತವಿಲ್ಲದೆಯೂ ಬೆಳೆಯಲು ಸಾಧ್ಯವಿಲ್ಲ. ಈ ಸಧ್ಯದಲ್ಲಿ ಚಳವಳಿಯು ಇನ್ನೂ ಎಳಸಾಗಿಯೇ ಇದ್ದು ಎದುರಿಸಬೇಕಾದ ಶಕ್ತಿ ಮಾತ್ರ ತುಂಬಾ ಬಲವಾದುದಾಗಿದೆ. ನಾವೀಗ ಎದುರಿಸುತ್ತಿವುದು ಬಗ್ಗು

ಒಡೆಯುವ ಶಕ್ತಿಯನ್ನೆಲ್ಲ ಸೆಳೆದುಕೊಳ್ಳುವಿಕೆಯನ್ನು (Co-option). ನಮ್ಮ ಚಳವಳಿ ಸ್ಪಷ್ಟರೂಪ ಪಡೆದಿಲ್ಲದ ಸ್ಥಿತಿಯಲ್ಲಿದ್ದು, ವಿಶ್ವಾತ್ಮಕ ಸೋದರಿಯತ್ವದ ಹೆಸರಿನಲ್ಲಿ ಮಹಿಳೆಯರ ಮಧ್ಯೆ ಅನೇಕ ಭಿನ್ನ ಬೇಧಗಳನ್ನು ತೆರೆಮರೆಗೆ ಸರಿಸಿದೆ. ಚಳವಳಿಯೊಳಗಿನ ವಿವಿಧ ವ್ಯಕ್ತಿಗಳ ಜತೆ ಮತ್ತು ಸಂಘಟನೆಗಳ ಜತೆ ಮಹಿಳೆಯೆನ್ನುವ ಆಧಾರದ ಮೇಲೆ ಸಹಭಾಗಿತ್ವ ಬೆಳೆಸುತ್ತಲೇ ಇದ್ದೇವೆ. ಪ್ರಾರಂಭದಲ್ಲಿ ಇದೊಂದೇ ನಮಗೆ ಮಾರ್ಗವಾಗಿದ್ದಿತು. ಆದರೀಗ ಪರಿಸ್ಥಿತಿ ಬೇರೆ ಇದ್ದು BJP ಯಂತಹ ಮೂಲಭೂತವಾದಿ ಶಕ್ತಿಗಳು ಕೂಡ ಮಹಿಳೆಯರ ಪ್ರಶ್ನೆಯಲ್ಲಿ ಕ್ರಿಯಾಶೀಲವಾಗಿವೆ.

1. ನಾವು ಈಗಲಾದರೂ ಒಂದು ಸ್ಪಷ್ಟವಾದ ತಂತ್ರೋಪಾಯ ರೂಢಿಸಿಕೊಳ್ಳಬೇಡವೇ ?
2. ಅತ್ಯಂತ ಕಡಿಮೆ ಸಮಯದಲ್ಲಿ ಅತೀ ಹೆಚ್ಚು ಮಹಿಳೆಯರನ್ನು ತಲುಪುವ ಜವಾಬ್ದಾರಿಯನ್ನು ಚಳವಳಿ ಭಾವಿಸಿಕೊಳ್ಳುವ ಸಂದರ್ಭದಲ್ಲಿ ಯಾರ ಜತೆ ಸಹಭಾಗಿತ್ವದಲ್ಲಿ ಕೆಲಸ ಮಾಡಬೇಕೆನ್ನುವ ಸ್ಪಷ್ಟ ಆಯ್ಕೆ ಮಾಡಿಕೊಳ್ಳಬೇಕಾದುದು ಮುಖ್ಯವಲ್ಲವೇ !
3. ಮಹಿಳೆಯರ ವಿಚಾರದಲ್ಲಿ ಸರ್ಕಾರದ ಉದ್ದೇಶಗಳನ್ನು ಚಳವಳಿ ವ್ಯವಸ್ಥಿತವಾಗಿ ಪ್ರಶ್ನಿಸಿಲ್ಲ ಯಾಕೆ ? ಎಡಗುಂಪುಗಳ ಬಗ್ಗೆ ಮಹಿಳಾ ಚಳವಳಿ ಹೊಂದಿರುವ ಸ್ಪಷ್ಟ ಟೀಕೆ ಮತ್ತು ಅನುಮಾನಗಳ ಸನ್ನಿವೇಶದಲ್ಲೇ ಇದನ್ನು ವಿಶ್ಲೇಷಿಸಬೇಕಾಗುತ್ತದೆ.

ಈ ವರದಿಯಲ್ಲಿ ಎತ್ತಿರುವ ಪ್ರಶ್ನೆಗಳು ಸ್ವಾಯತ್ತ ಗುಂಪುಗಳಲ್ಲಿ, ಸಮೂಹ ಸಂಘಟನೆಗಳಲ್ಲಿ, ಸರ್ಕಾರೇತರ ಸಂಸ್ಥೆಗಳಲ್ಲಿ, ಸರಕಾರ ಸಹಯೋಗದೊಂದಿಗೆ ಅಥವಾ ಇಲ್ಲದೇ ಕೆಲಸ ಮಾಡುತ್ತಿರುವ ಎಲ್ಲರಿಗೂ ಅನ್ವಯಿಸುತ್ತದೆ.

ಸರ್ಕಾರ ಜನರೊಂದಿಗೆ ತನ್ನ ವಿಶ್ವಾಸಾರ್ಹತೆಯನ್ನು ಕಳೆದುಕೊಳ್ಳುತ್ತಿರುವ ಸಂದರ್ಭದಲ್ಲಿ ತನ್ನ ಅನೇಕ ಬಗೆಯ ಕಾರ್ಯಕ್ರಮಗಳಲ್ಲಿ ನಮ್ಮನ್ನು ಒಳಗೊಳ್ಳಿಸಲು ಹವಣಿಸುತ್ತಿರುವ ಸಂಬಂಧಕ್ಕನ್ವಯಿಸಿ ಈ ಮಾತನ್ನು ಹೇಳಲಾಗುತ್ತಿದೆ. ಸರ್ಕಾರದೊಂದಿಗೆ ಸಹಭಾಗಿತ್ವಕ್ಕೆ ಇಳಿಯುವ ಮುನ್ನ ಈ ಪ್ರಶ್ನೆಗಳನ್ನು ಕುರಿತು ನಾವು ಚಿಂತಿಸುವುದು ಮುಖ್ಯ.

●

---

## ಮಹಿಳಾ ಸಮಖ್ಯಾ ಕರ್ನಾಟಕ ಕೆಲಸಗಾರರ ಅಸೋಸಿಯೇಷನ್

**ಮಹಿಳಾ ಸಮಖ್ಯಾ ಕರ್ನಾಟಕ** ಎನ್ನುವ ಸರ್ಕಾರಿ ಪೋಷಿತ ಮಹಿಳಾ ಕಾರ್ಯಕ್ರಮದಲ್ಲಿ ಕೆಲಸ ಮಾಡುತ್ತಿರುವ ಸಹಯೋಗಿನಿಯರು, ಕ್ರೆಶ್ ಕೆಲಸಗಾರರು ಮತ್ತು ಕಛೇರಿ ಸಿಬ್ಬಂದಿಯವರು ಕರ್ನಾಟಕದಾದ್ಯಂತ ಐದು ಜಿಲ್ಲೆಗಳಾದ ಮೈಸೂರು, ರಾಯಚೂರು ಬಿಜಾಪುರ, ಬೀದರ್ ಮತ್ತು ಗುಲ್ಬರ್ಗಾಗಳಲ್ಲಿ ಒಟ್ಟಾಗಿ ಮೇಲಿನ ಹೆಸರಿನಲ್ಲಿ ಅಸೋಸಿಯೇಷನ್ ಒಂದನ್ನು ಕಟ್ಟಿಕೊಂಡಿದ್ದಾರೆ. ಮೇಲ್ಕಂಡ ಜಿಲ್ಲೆಗಳ ದುರ್ಗಮ ಹಳ್ಳಿಗಳಲ್ಲಿ ಕೆಲಸ ಮಾಡುವ ಸಹಯೋಗಿನಿಯರು ಮತ್ತು ಕ್ರೆಶ್ ಕೆಲಸಗಾರ್ತಿಯರಾದ ಇವರೆಲ್ಲಾ ಮಹಿಳೆಯರೇ ಆಗಿದ್ದು ಅತ್ಯಂತ ಕಷ್ಟಕರ ಸನ್ನಿವೇಶದಲ್ಲಿ ಕೆಲಸ ಮಾಡುತ್ತಿದ್ದಾರೆ. ಸ್ವಯಂ ಸೇವೆಯ ಹೆಸರಿನಲ್ಲಿ ಕನಿಷ್ಟ ಗೌರವಧನಕ್ಕೆ ಕೆಲಸ ಮಾಡುವ ಇವರಿಗೆ ಯಾವುದೇ ಭತ್ಯೆಗಳಾಗಲಿ, ವೈದ್ಯಕೀಯ ಸೌಲಭ್ಯಗಳಾಗಲಿ, ರಜೆ ಸೌಲಭ್ಯಗಳಾಗಲಿ, ನಿರ್ದಿಷ್ಟ ಕಾರ್ಯ ವೇಳೆಯಾಗಲಿ ಇರುವುದಿಲ್ಲ. ಅಲ್ಲದೇ ನಿರ್ದಿಷ್ಟ ವಿವರಣೆ ಇಲ್ಲದ ಇವರ ಸೇವೆಯನ್ನು ಮೇಲಾಧಿಕಾರಿಣಿಯರು ತಮಗೆ ಇಷ್ಟ ಬಂದ ರೀತಿಯ ಕಾನೂನು ಕಟ್ಟಳೆಗಳಿಗೆ ಒಳಪಡಿಸುತ್ತಾ ವಿಪರೀತ ಕಿರುಕುಳ ಕೊಡುತ್ತಿದ್ದಾರೆ. ಈ ಕೆಲಸಗಾರ್ತಿಯರು ತಮ್ಮ ಯಾವತ್ತೂ ಸಮಸ್ಯೆಗಳನ್ನು ಬೆಳಕಿಗೆ ತರಲು ಮತ್ತು ಸೇವೆಯ ಸ್ಥಿತಿಗತಿಯನ್ನು ಉತ್ತಮಪಡಿಸುವಂತೆ ಒತ್ತಾಯಿಸಲು ಈ ಅಸೋಸಿಯೇಷನ್ ಅನ್ನು ರೂಪಿಸಿಕೊಂಡಿದ್ದಾರೆ.

# ವಿಪರ್ಯಾಸ

ಏನಂತೆ ಅಲ್ಲಿ ?
ಗೌಜುಗದ್ದಲ ಹೌದಾದರೂ
ಅಲ್ಲ ಅದು ಸಂತೆ...
ಬಾಽಽಳ ಸಂತೆ
ಮುಗಿಸಿದೊಬ್ಬಾತನ ಮಡದಿಗೆ
ಉಣಬಡಿಸುತಿರುವ ಉಪದೇಶಾಮೃತ !
ನುಂಗಲಾರದ-ಉಗಿಯಲಾರದ
ಕಡುಕಹಿಯ ಅಮೃತ (?)
ಆದೇಶ....ಉಪದೇಶ....ಆಜ್ಞೆ
ಎಲ್ಲ....
ಎತ್ತಲಾಗದ ತಗ್ಗಿದ ತಲೆಯು
ನೆತ್ತರೊಸರುವ ಕಂಗಳಿಗೆ
ಉಪ್ಪು ಸವರುವ ಉಪದೇಶಾಮೃತ !

"ಮನಿಃ ಹಿರ್ಯಾಸ್ನಂಗಿ
ಏನ್ ಸುಕಾ ಸುರ್‍ಕೊಳಾಕ ಉಳದೀಽಽ ಯು ?
ಅವ್ನಽಽ ಉಳದು
ನಿಂಗ್ ಬರ್‍ಬಾರ್ದಿತ್ತೇನಽಽ ಅಳಗಾಲಾಽಽಽ"

ಮೆತ್ತನ್ನ ಶಾಲ್ಲಿ ಮುಚ್ಚಿ ಪೆಟ್ಟುಕೊಟ್ಟ
ದನಿಗಳು ಹಲವು. . .
"ಕೂಸಿನ ಮೋತೀ ನೋಡಿ
ಕಾಲಾ ಹಾಕವಾಽಽಽ
ನಿಂದೇನ್ ಐತಿನ್ನ ಇದ್ದೂ ಸತ್ತಂಗ....
ಕೂಸಿನ ಮ್ಯಾಲ ತಪಾತಗೀ ತಂಗೀಽಽ
ಜಗದಾನ್ನ ಗಂಡಸ್ರೆಲ್ಲಾ
ಅಣ್ಣಾ-ತಮ್ಮಾ....
ನಾಕ್ ಮಂದಿ
ಬಳ್ಳೆತ್ತಿ ತೋರ್ಸ್ದಂಗ ನಡದು
ಕೈಲಾಸದ ಹಾದೀ
ಸನೇ ಮಾಡು...."

ಇಲ್ಲೇನಂತೆ ಮತ್ತೆ ?
ಜನ-ಜಾತ್ರೆ ?
ಬಾಳ ಹಾದಿಯು ಮಧ್ಯೆ
ಕೈಬಿಟ್ಟು ನಡೆದಳಂತೆ ಅವನ
ಒಬ್ಬಂಟಿ ಮಾಡಿ....
ಪಾ ಽಽಪ ಹುಡುಗ ಸಂಣಾಂವಾ....
ಮಕ್ಕಳು ಮೂರೇ ಅಂತೆ !
ದಿಕ್ಕೆಟ್ಟು ಕುಳಿತಿದೆ ದಾರಿಕಾಣದೆ
ಪಾ ಽಽಪ !

ಹಿರಿಯರ ಕರುಣೆಯ ಹೊಳೆ
ಹೆಂಗೆಳೆಯರ ಲೊಚ ಲೊಚ....
"ಬದುಕಿ ಬಾಳೂದ್ಯೆತಪಾ ಇನ್ನ ಽಽ
ಹುಡುಗೀ ಮ್ಯಾಲೆ
ಜೀವಾ ಇಟ್ಕೊಂಡಿದ್ದೀ
ಶಿವಗ ಸರೀ ಬರ್ಲಿಲ್ಲಾ....
ನಿಂಗ್ ಬ್ಯಾಡ ಖರೇ
ನಿಂಗ್ ಬ್ಯಾಡ ಖರೇ....
ಮಕ್ಕಳಿಗೊಂದ್ ತಾಯ್ ಬೇಕೂಽಽಽ

ನಿನ್ನ ಹೊಟ್ಟೀ ನೆತ್ತೀ
ನೋಡಾಕೊಂದ ಹೆಣ್ಣ ಬೇಕೂ
'ಹೂಂ' ಅನ್ನು
ನಿನ್ನ ಚೊಲೊದಕ್ಕ ಽಽ ಹೇಳ್ತೇನಿ
ಆದದ್ದಾತು ಮರ್‍ತಬಿಡಪಾ
ಹುಡ್ಕಿ ತರ್‍ತೀವಿ ಹುಡ್ಗೀ ಽಽ
ಒಲ್ಲೆನ ಬ್ಯಾಡಾ....

* * *

ಶ್ರೀಮತಿ ಕೋ. ಅನಸೂಯ ಸಿದ್ಧರಾಮು

# ದಶಕ ತುಂಬಿದಾಗ...

'ಮಾನಸ'ದ ಅವಲೋಕನ ಕುರಿತಾಗಿ ಕಳೆದ ವರ್ಷದ ಜನವರಿಯಲ್ಲಿ ಪ್ರಕಟಿಸಿದ ಬರಹಕ್ಕೆ ಅನೇಕ ರೀತಿಯ ಪ್ರತಿಕ್ರಿಯೆಗಳು ಕೇಳಿಬಂದಿದ್ದವು. ಜಂಟಾಟಗಳ ನಡುವೆಯೇ ಪತ್ರಿಕೆಯನ್ನು ಉಳಿಸಲು/ಬೆಳೆಸಲು ನಡೆಸುತ್ತಿರುವ ನಮ್ಮ ಹೋರಾಟಕ್ಕೆ/ಕಾಳಜಿಗೆ ಹಲವಾರು ಮಂದಿ ಹೃದಯಪೂರ್ವಕವಾಗಿ ಸ್ಪಂದಿಸಿದ್ದರು, ಪ್ರೋತ್ಸಾಹಿಸಿದ್ದರು. ಹಣ ಸಹಾಯ ನೀಡಲೂ ಸಹ ಮುಂದಾಗಿದ್ದರು. ಹೀಗೆಯೇ ಜಂಟಾಟಗಳ ನಡುವೆಯೇ 1995ರ ಜನವರಿಗೆ ಕಾಲಿಟ್ಟಿದ್ದೇವೆ.

ಪತ್ರಿಕೆಯನ್ನು ನಿಯತಕಾಲಿಕವಾಗಿ ತರುವುದು ಸುಲಭದ ಕೆಲಸವಾಗಿ ಕಾಣುತ್ತಿಲ್ಲ. ಹಾಗಾಗಿ ಸಂಚಿಕೆಗಳು ನಿಮಗೆ ತಡವಾಗಿ ತಲುಪುತ್ತಿವೆ. ಹೀಗೆ ಪತ್ರಿಕೆಯನ್ನು ಉಳಿಸುವ/ಬೆಳೆಸುವ ಹೋರಾಟವೇ ಈ ಹತ್ತು ವರ್ಷದ ಅವಧಿಯಲ್ಲಿ ನಮಗೆ ಹಲವಾರು ಪಾಠಗಳನ್ನು ಕಲಿಸಿದೆ.

ಚಳುವಳಿಯ ಹಂತದಲ್ಲಿ 'ಮಾನಸ'ದ ಬೆಳವಣಿಗೆ/ಕೊಡುಗೆಗಳನ್ನು ಗುರುತಿಸುವಾಗ ಹಲವಾರು ಪ್ರಶ್ನೆಗಳು ನಮಗೆ ಎದುರಾಗುತ್ತವೆ. ಕರ್ನಾಟಕದಲ್ಲಿ ಮಹಿಳಾ ಚಳುವಳಿ ಹಾಗೂ ಇತರ ಚಳುವಳಿಗಳೊಂದಿಗೆ ಗುರುತಿಸಿಕೊಂಡು ಹಲವಾರು ವರ್ಷಗಳಿಂದ ಪ್ರಕಟವಾಗುತ್ತಿರುವ 'ಮಾನಸ'ದ ಬೆಳವಣಿಗೆಯ ಜವಾಬ್ದಾರಿ ಕೇವಲ ಸಂಪಾದಕ ಬಳಗದ್ದಾಗಿರುತ್ತದೋ ? ಈ ಪ್ರಶ್ನೆಗೆ ಹೌದು ಹಾಗೂ ಅಲ್ಲ ಎನ್ನುವ ಎರಡೂ ಉತ್ತರವೂ ಇದೆ. ಲೇಖನ ಒಟ್ಟು ಹಾಕುವ, ಹಣ ಹೊಂದಿಸುವ, ಇತರರನ್ನು ಸಂಪರ್ಕಿಸುವ ಜವಾಬ್ದಾರಿಗಳೆಲ್ಲ ಸಂಪಾದಕ ಮಂಡಳಿಯ ಮೇಲೆಯೇ ಇರುತ್ತದೆ. ಆದರೆ ಚಳುವಳಿ ಹಾಗೂ ಪತ್ರಿಕೆಯ ಸಂಬಂಧವನ್ನು ವಿಶ್ಲೇಷಿಸುವಾಗ ಚಳುವಳಿಯೂ ಸಹ ಪತ್ರಿಕೆಯನ್ನು ಬಲಗೊಳಿಸುವ/ಬೆಳೆಸುವ ಜವಾಬ್ದಾರಿಯನ್ನೂ, ಕಾಳಜಿಯನ್ನೂ ಸಹ ಹೊಂದಿರಬೇಕಾಗುತ್ತದೆ. ಕೆಲವು ವರ್ಷಗಳ ಹಿಂದೆ ಮೈಸೂರಿನಲ್ಲಿ ನಡೆದ ಮಹಿಳಾ ಪತ್ರಿಕೆಗಳ ಬಗ್ಗೆಗಿನ ಸಂಕಿರಣದಲ್ಲಿ ಚಳುವಳಿ ಹಾಗೂ ಪತ್ರಿಕೆಯ ನಡುವಿನ ಸಂಬಂಧದಲ್ಲಿ ಇಂತಹ ಜವಾಬ್ದಾರಿಯ ಪ್ರಶ್ನೆಗಳು ಬಂದಿದ್ದವು. ಖ್ಯಾತ ಲೇಖಕಿ ಹಾಗೂ ಚಳುವಳಿಯ ಬಗ್ಗೆ ಕಾಳಜಿ ಹೊಂದಿರುವ ವಿಜಯಾ ದಬ್ಬೆಯವರು ಈ ವಿಚಾರದಲ್ಲಿ ಆಡಿದ ಕೆಲವು ಮಾತುಗಳು ಉಲ್ಲೇಖಾರ್ಹ. ಚಳುವಳಿಯ ಹಂತದಲ್ಲಿ 'ಮಾನಸ'ವನ್ನು ಗಮನಿಸುವಾಗ ಇದರ ಸೋಲು/ಗೆಲುವು, ಬೆಳವಣಿಗೆಯ ಜವಾಬ್ದಾರಿ ಇಂತಹ ವಿಚಾರವನ್ನು ಕೇವಲ 'ಮಾನಸ' ಬಳಗದ ಮೇಲೆ ಮಾತ್ರ ಹಾಕಲು ಸಾಧ್ಯವಿಲ್ಲ. ಚಳುವಳಿಯ ಹಂತದಲ್ಲಿ 'ಪತ್ರಿಕೆ'-ಎಲ್ಲರದ್ದು ಆಗಿರುತ್ತದೆ. ಅದನ್ನು ಬೆಳೆಸುವ/ಉಳಿಸುವ ಜವಾಬ್ದಾರಿಯುತ ಕಾಳಜಿ ನಮ್ಮದೂ ಕೂಡಾ ಆಗಿರಬೇಕಾಗುತ್ತದೆ ಎಂಬ ವಿಜಯಾರವರ ಮಾತುಗಳು ಪತ್ರಿಕೆಯ ಬೆಳವಣಿಗೆಯ ಜವಾಬ್ದಾರಿಯಲ್ಲಿ ಎಲ್ಲರ ಪಾತ್ರವನ್ನೂ ಸಹ, ಕಾಳಜಿಯನ್ನೂ ಸಹ ಒಳಗೊಳ್ಳುವ ಅಗತ್ಯ ಕುರಿತು ಹೇಳುತ್ತದೆ.

ಹೀಗೆ 'ಮಾನಸ'ದ ಬೆಳವಣಿಗೆಯ ಜವಾಬ್ದಾರಿಯನ್ನು ಪ್ರೀತಿಯಿಂದ/ಕಾಳಜಿಯಿಂದ ನಿರ್ವಹಿಸಿದ 'ಮಾನಸ'ದ ಹಲವಾರು ಗೆಳತಿಯರಿದ್ದಾರೆ. ಲೇಖನ ಕಳಿಸುವುದರಿಂದ ಹಿಡಿದು ಹಣ ಸಂಗ್ರಹಿಸುವ, ಕಳುಹಿಸುವ ಕಾರ್ಯಗಳನ್ನು ಮುತುವರ್ಜಿಯಿಂದ ನಿರ್ವಹಿಸಿದ್ದಾರೆ. ಪತ್ರಿಕೆಗಳನ್ನು ಸಂಪಾದಿಸಿಕೊಡಿ ಎಂದು ಕೇಳಿದಾಗ ಶ್ರಮವಹಿಸಿ ಸಂಪಾದಿಸಿ ಕೊಟ್ಟವರಿದ್ದಾರೆ. ಇವು ಎಲ್ಲಾ ಗೆಳತಿಯರ ಬದ್ಧತೆ/ಕಾಳಜಿಯನ್ನು ಪ್ರತಿಬಿಂಬಿಸುತ್ತದೆ.

ಹೀಗೆ 'ಮಾನಸ'ಕ್ಕೆ ನಿರಂತರವಾಗಿ ಶ್ರಮ ವಹಿಸಿ ಕಾಳಜಿ ತೋರಿಸಿದ ಹಲವರು ಮಾನಸ ಬಳಗದ, ಸಂಪಾದಕ ಬಳಗದ ಜೊತೆ ಇರಲಿ, ಸಂಪಾದಕ ಮಂಡಳಿಯ ವಿಸ್ತರಣೆಯು ಆಗಲಿ ಎಂಬ ಉದ್ದೇಶದಿಂದ 1995ರ ಜನವರಿಯಿಂದ ಕೆಲವರನ್ನು 'ಮಾನಸ'ದ ಬಳಗಕ್ಕೆ ಸೇರಿಸಿಕೊಂಡಿದ್ದೇವೆ. ಹಣದ ಬದ್ಧತೆಯ ಜೊತೆಗೆ 'ಮಾನಸ'ದ ಇತರ ಎಲ್ಲಾ ಜವಾಬ್ದಾರಿಯನ್ನು ಹೊರಲು ಒಪ್ಪಿರುವ ಈ ಗೆಳತಿಯರಿಗೆ ಮಾನಸ ಸ್ವಾಗತವನ್ನು ಬಯಸುತ್ತದೆ.

ಯಾವುದೇ ಸಂಘಟನೆಯ ದೃಷ್ಟಿಕೋನದ ಅಂತಃಸತ್ವ ಅಡಗಿರುವುದು ಅದರ ದೃಷ್ಟಿಕೋನ, ಪ್ರಾಶಸ್ತ್ಯ, ನೀಡುವ ವಿಚಾರಗಳು ಸಿದ್ಧಾಂತಗಳು ಹಾಗೂ ಹಣ ಸಂಗ್ರಹಣೆಯ ಮೂಲ ಇವು ಆ ಸಂಘಟನೆಯ, ಅಥವಾ

ಕಾರ್ಯಕ್ರಮದ ಸ್ವರೂಪವನ್ನು ನಿರ್ಧರಿಸುವಲ್ಲಿ ಪ್ರಮುಖ ಪಾತ್ರವನ್ನು ವಹಿಸುತ್ತವೆ. ಈ ಹಿನ್ನೆಲೆಯಲ್ಲಿಯೇ ಮಾನಸ ತನ್ನ ಸ್ವಾಯತ್ತತೆಯನ್ನು ಕಾಪಾಡಿಕೊಂಡು ಬರುವ ಹಾಗೂ ಪತ್ರಿಕೆಯನ್ನು ಕ್ರಮವಾಗಿ ತರುವ ಉದ್ದೇಶದಿಂದ ಒಂದು ನಿರ್ದಿಷ್ಟ ಧೋರಣೆಯನ್ನು ನಿರಂತರವಾಗಿ ಕಾಪಾಡಿಕೊಂಡು ಬಂದಿದೆ.

ಇಂದು ಜನಪ್ರಿಯ ಮಾಧ್ಯಮದ ಪ್ರಭಾವದ ಅಡಿಯಲ್ಲಿ ಓದುಗರ ಸಂಖ್ಯೆ ಇಳಿಮುಖವಾಗುತ್ತಿದೆ. ಗಂಭೀರವಾದ ಓದು ಕಡಿಮೆಯಾಗುತ್ತಿರುವುದು ಒಂದು ವಿಷಾದನೀಯ ಸಂಗತಿ. ಜನಪ್ರಿಯ ಪತ್ರಿಕೆಗಳ ತಲೆಬರಹಗಳ ಕಡೆ ಮಾತ್ರ ಕಣ್ಣು ಹಾಯಿಸುವ ಓದುಗರು ಸಣ್ಣ ಪತ್ರಿಕೆಗಳತ್ತ ತಿರುಗಿ ನೋಡಿಯಾರೆ ? ಸಣ್ಣ ಪತ್ರಿಕೆಗಳು ಎದುರಿಸುವ ಸಮಸ್ಯೆಗಳು ನೂರಾರು. ಇದರ ನಡುವೆ ನಡೆಸುವ ಇಂತಹ ಪ್ರಯತ್ನಗಳತ್ತ, ಅದರಲ್ಲೂ ಗಂಭೀರವಾದ ಮಹಿಳಾ ಪತ್ರಿಕೆಗಳ ಬಗ್ಗೆ ಜನರಲ್ಲಿ ಒಂದು ರೀತಿಯ ಸಿನಿಕತನ ಕಂಡು ಬರುತ್ತದೆ. ಸಾಮಾಜಿಕ ಕಾಳಜಿಯಿರುವವರೆಲ್ಲಾ ಈ ಸಮಸ್ಯೆಯನ್ನು ಗಂಭೀರವಾಗಿ ಪರಿಗಣಿಸಬೇಕಾಗಿದೆ.

ಸಣ್ಣ ಪತ್ರಿಕೆಗಳು ಎದುರಿಸುವ ಹಲವಾರು ಸಮಸ್ಯೆಗಳಲ್ಲಿ ಹಣಕಾಸಿನ ಸಮಸ್ಯೆಯು ಪ್ರಮುಖವಾದುದು. ಮಾನಸ ಸಹ ಎದುರಿಸುವ ಈ ಸಮಸ್ಯೆ ನಿರಂತರವಾದುದು. ಪತ್ರಿಕೆಗಾಗಿ ಅಗತ್ಯವಾದ ಹಣವನ್ನು ಸಂಗ್ರಹಿಸುವಲ್ಲಿ 93ರ ಧೋರಣೆ ಹಾಗೂ ಯೋಜನೆಗಳನ್ನೇ ಅನುಸರಿಸಿ 1994ರಲ್ಲಿಯು ಹಣ ಸಂಗ್ರಹಿಸುವ ಚಟುವಟಿಕೆಯಲ್ಲಿ ಹೆಚ್ಚು ಒದುಗರನ್ನು ತೊಡಗಿಸಿಕೊಳಲು ಪ್ರಯತ್ನಿಸಿದ್ದೇವೆ.

ಪತ್ರಿಕೆಗಾಗಿ ಹಣ ಸಂಗ್ರಹಿಸುವುದು ನಮ್ಮ ಸಿದ್ಧಾಂತ, ಧ್ಯೇಯ ಧೋರಣೆ, ಹಾಗೂ ಕಾರ್ಯ ಚಟುವಟಿಕೆಯ ವಿಸ್ತರಣೆಯೆಂದೇ ನಾವು ಭಾವಿಸಿದ್ದೇವೆ. ಪತ್ರಿಕೆಗೆ ಸದಾ ಬೆಂಬಲ, ಪ್ರೋತ್ಸಾಹವನ್ನು ನೀಡಿ, ನೀರೆರೆದ ಓದುಗರನ್ನು ಹಣ ಸಂಗ್ರಹಿಸುವಲ್ಲಿ ತೊಡಗಸಿಕೊಂಡಿದ್ದೇವೆ. ಒಂದು ಸಂಚಿಕೆಗೆ ಬೇಕಾದ 1700/-ರೂ.ಗಳನ್ನು ಸಂಪಾದಕೀಯ ಮಂಡಳಿ ಸದಸ್ಯರು ಹಂಚಿಕೊಂಡು ನಿರ್ದಿಷ್ಟ ಸಮಯದಲ್ಲಿ ಕೊಡುವುದೆಂದು ತೀರ್ಮಾನಿಸಿದ್ದೇವೆ. ಸ. ಮಂಡಳಿಯ ಸದಸ್ಯರಿಗೆ ಪ್ರಿಂಟಿಂಗ್ ಸಮಯದಲ್ಲಿ ಸಂಗ್ರಹಿಸಲು ಸಾಧ್ಯವಾಗದಿದ್ದರೆ, ಅದನ್ನು ವೈಯಕ್ತಿಕವಾಗಿ ನೀಡಿ, ನಂತರ ಸಂಗ್ರಹಿಸಿಕೊಳ್ಳುವ ತೀರ್ಮಾನವನ್ನು ತೆಗೆದುಕೊಂಡಿದ್ದೇವೆ. ಈ ನಿರ್ಧಾರ ಪತ್ರಿಕೆಯ ಕ್ರಮವಾದ ಪ್ರಕಟಣೆಗೆ ಪೂರಕವಾದದ್ದಾದರೂ, ನಮ್ಮ ಮೇಲೆ ಒಂದು ದೊಡ್ಡ ಹೊರೆಯಾದದ್ದು ನಿಜ. ತಮಗೆ ಬರುವ ಸಂಬಳದಲ್ಲಿ ಸ್ವಲ್ಪ ಹಣವನ್ನು ಮಾನಸಕ್ಕೆ ಕೊಡುವುದು ತೀರಾ ಕಷ್ಟದ ಸಂಗತಿಯಾಗಿರುವುದು ನಿಜ ಅಷ್ಟೇ ಅಲ್ಲ, ನಮ್ಮ ಬದ್ಧತೆಯನ್ನು ಪರೀಕ್ಷಿಸುವ ಹಲವಾರು ರೀತಿಯ ಗೊಂದಲ, ದ್ವಂದ್ವವನ್ನು ಉಂಟು ಮಾಡುವ ಪ್ರಶ್ನೆಯೂ ಆಗಿದೆ. ನಿರ್ದಿಷ್ಟವಾದ ಮೊತ್ತವನ್ನು ಸಮಯಕ್ಕೆ ಸರಿಯಾಗಿ ಕೊಡುವುದೆಂದರೆ, ಹಣ ಸಂಗ್ರಹಿಸಲು ಓಡಾಡಬೇಕಾಗುತ್ತದೆ. ಪತ್ರ ವ್ಯವಹಾರವನ್ನು ಮಾಡಬೇಕಾಗುತ್ತದ. ಆ ತಿಂಗಳು ಸಂಗ್ರಹಿಸಲು ಸಾಧ್ಯವಾಗದಿದ್ದರೆ ಕೈಯಿಂದ ಕೊಡಬೇಕಾಗುತ್ತದೆ. ಮನೆಯ ಕಷ್ಟ ಸುಖಗಳಿಗಾಗುವ ಹಣವನ್ನು ಮಾನಸಕ್ಕೆ ಕೊಡುವಾಗ ಪತ್ರಿಕೆಯ ಪ್ರಕಟನೆ ಇಷ್ಟು ಅಗತ್ಯವಾದುದೇ, Worth ಆದುದೇ ಎಂಬ ಗೊಂದಲ ಹಲವಾರು ಬಾರಿ ಉಂಟಾಗಿದೆ. ಈ ಎಲ್ಲಾ ಮಿತಿಗಳನ್ನು ಮೀರಿ ಪತ್ರಿಕೆಯ ಪ್ರಕಟಣೆಯನ್ನು ಮುಂದುವರಿಸಿಕೊಂಡು ಬಂದಿದ್ದೇವೆ. ಪತ್ರಿಕೆಯ ಪ್ರಾರಂಭದಿಂದಲೂ ಮಾನಸ ಪ್ರಕಟಣೆಯ ಕಷ್ಟಸುಖಗಳನ್ನು ಹಂಚಿಕೊಂಡ ಆತ್ಮೀಯ ಓದುಗರ ಸಹಕಾರದಿಂದ ವೈಯಕ್ತಿಕವಾಗಿ ಬೀಳುವ ಹೊರೆಯ ಭಾರವನ್ನು ಕಡಿಮೆ ಮಾಡಿಕೊಂಡಿದ್ದೇವೆ. ಪತ್ರಿಕೆಗೆ ಪ್ರತಿತಿಂಗಳೂ 10/-ರೂ.ಗಳನ್ನು ನೀಡುವುದರ ಮೂಲಕ ಉಷಾ, ಮಂಜುಳಾ ಸಿ. ಜಿ. ನೆರವಾಗಿದ್ದಾರೆ. ವಾಣಿಯವರು ಪತ್ರಿಕೆಗೆ ಪ್ರತಿತಿಂಗಳೂ 25/-ರೂ. ನೀಡಿದ್ದಾರೆ. ಪ್ರತಿತಿಂಗಳೂ ಕಡ್ಡಾಯವಾಗಿ ಒಂದು ಚಂದಾ ಹಣವನ್ನು ಸಂಗ್ರಹಿಸಿ, ಹೊಸ ಓದುಗರಿಗೆ ಮಾನಸವನ್ನು ಗೀತಾದಾಸ್, ಶ್ರೀಮತಿ ವಿಜಯ, ಗೀತಾ, ಪ್ರವೀಣಾ, ತುಳಸಿದೇವಿ, ಭಾಗ್ಯಲಕ್ಷ್ಮಿ, ವಿಜಯಲಕ್ಷ್ಮಿ, ಅರುಂಧತಿ, ಗಾಯತ್ರಿ, ರಂಜನಾ ಪರಿಚಯ ಮಾಡಿಕೊಟ್ಟು ಪತ್ರಿಕೆಗೆ ಆಸರೆಯಾಗಿದ್ದಾರೆ. ಹಲವಾರು ಗೆಳತಿಯರು ಆಗಾಗ ಹೆಚ್ಚುವರಿ ಹಣ ಕಳಿಸಿ ನೆರವಾಗಿದ್ದಾರೆ. ಪತ್ರಿಕೆಯನ್ನು ತಮ್ಮದೆಂದೇ ಭಾವಿಸಿ ಇವರು ನೀಡಿದ ನೆರವಿಗೆ ಮಾನಸ ಕೃತಜ್ಞತೆಯನ್ನು ಹೇಳಲೇಬೇಕು.

ಪತ್ರಿಕೆಯ ನಿಜವಾದ ಪೋಷಕರಾಗಬೇಕಾದುದು ಓದುಗರು. ಚಂದಾ ನವೀಕರಿಸಿ ಎಂದು ಮನವಿ ಮಾಡಿದಾಗಲೆಲ್ಲಾ ಓದುಗರು ಸಕಾಲದಲ್ಲಿ ನಮ್ಮ ಮನವಿಗೆ

**(21ನೇ ಪುಟ ನೋಡಿ)**

# ಕುಟುಂಬ

○

ಮೇಲೆ ಮೇಲೆ ಏರಿ
ಬಾವುಟದ ಕನಸು ಕಾಣುವ ನೀ
ಯಾಕೆ ಕಾಡುತ್ತೀಯೇ ನನ್ನ
ನನ್ನೊಳಗೆಲ್ಲೊ ಹುದುಲಲ್ಲಿರುವ
ತಟ್ಟನೆ ಎದುಉ ಬಂದು
ಪ್ರಶ್ನೆ ಯಾಕಾಗುತ್ತೀಯೇ ?

ಎದುರಿನವರ ಕೋತಿ ಕುಣಿತ
ಮಾತಿನ ಸುರಿಮಳೆಯಾದಾಗ
ಗೆಳತಿಯರ ಮಾತಿನ ಆವರಣ
ಜೇಡ ಬಲೆಯಂತೆ ಕಂಡಾಗ
ಮತ್ತೆ ಕಟ್ಟುವ ಜೇಡನಂತೆ
ಗೂಡು ಕಟ್ಟುತ್ತೀಯಾ ಯಾಕೆ ?

○

ಕಾಡುತ್ತೀಯ ಯಾಕೆ ಗಾಂಧಾರಿ
ವಿಮುಖಳಾಗಲೆ ನಿನ್ನಂತೆಯೇ ಪಥಕೆ ನಾನು
ತೋರಬಹುದಿತ್ತು ದಾರಿ ಗಂಡನಿಗೆ
ಅಳುವದಿಲ್ಲ ಮನಸು
ನಿನಗೆ

ಮರಗುವದಿಲ್ಲ........ತಾಯಿಯಿದ್ದೂ
ಅನಾಥರಾದ, ಕುರುಡು ಪ್ರೇಮ ಸವಿದ
ದುರ್ಯೋಧನನಿಗೆ ಮರಗುತಿದೆ ಮನ
ಆಳಿದ್ದರೆ ರಾಜ್ಯವ, ತಬ್ಬಿದ್ದರೆ ಮಕ್ಕಳ ನೀನು
ಅನಾಥ ಪ್ರಜ್ಞೆ ಕಾಡುತ್ತಿರಲಿಲ್ಲವಲ್ಲ ! ದ್ರೌಪದಿಯಲ್ಲೂ
ಕಾಣುತ್ತಿದ್ದ ! ತನ್ನ ತಾಯಿಯ
ಎಂಥ ಹೊಣೆಗೇಡಿ ತಾಯಿಯೇ

○

ಮೈ ನೆರೆದ ಮಗಳ ಎದುರು
ಲಲ್ಲೆಗೈವ ತಾಯಿಯೇ, ಹೇಳಲಾರೆಯಾ ತಿಳಿಸಿ
ಮಗಳಿಗೆ ಪ್ರೀತಿ ಪ್ರೇಮದ ನಿರಂತರ ಒರತೆಯಾ,
ಹಾಕಿದ ಸಂಕೋಲೆ ತಾಯಿಯಂತೆ ನೀ ಹಾಕಿಲ್ಲ,
ಮಗಳಿಗೆ, ಮತ್ತೆ ನೋಡಿಲ್ಲ ನೀನು
ತಾಯ್ತನ ಸಂಭ್ರಮ, ಹೌದು ಜವಾಬ್ದಾರಿ
ಹೊರಳಿ ನೋಡದೆ ಅವಳ ಮೈಮನದ ಛಾಯೆ
ತಿರುಗುತ್ತಿರುವೆಯಲ್ಲ ಗಾಣದಲಿ ಭ್ರಮೆ

○

ಗರ್ಭಿಸಿದ ಗರ್ಭ ಚಿಂದಿ ಚೂರಾಗಿಸಿ
ತುಪ್ಪದ ಕುಡಿಕೆಗಳಲಿ, ಹಾಕಿ ಟ್ಯೂಬುಗಳಲಿ
ಬೆಳೆಸಿ .... .... .... .... ....
ಹೊಕ್ಕಳ ಬಳ್ಳಿ ಕತ್ತರಿಸಿ ಬಂದವರ
ಹರಿಬಿಟ್ಟೆ ಭವಿಷ್ಯಗಟಾರದಲಿ ....
.... .... .... .... ....

○

ಹೆತ್ತೆ ತಾಯಿಯಾಗಬೇಕೆ
ಹಾಲೂಡಿಸಿಯೇ ಅಮ್ಮನಾಗಬೇಕೆ
ಪ್ರೀತಿಸಿ ಸುತ್ತಲಿನವರ ತನ್ನ
ಹಿಡಿ ಪ್ರೀತಿ ನೀಡಿದವಳು
ಅ – ಕುಟುಂಬಿ
ಅಲ್ಲ
ವಿಶ್ವಕುಟುಂಬಿ

● ಭಾರತಿ ಹಿರೇಮಠ

# ಸ್ವಾಯತ್ತ ಸ್ತ್ರೀ ಸಂಘಟನೆಗಳು ಮತ್ತು ಸಂಘಟನಾತ್ಮಕ ಸಂಬಂಧಗಳು

1975ರಲ್ಲಿ ಸ್ವಾಯತ್ತ ಮಹಿಳಾ ಸಂಘಟನೆಗಳು ಮೊದಲ ಬಾರಿಗೆ ಅಸ್ತಿತ್ವಕ್ಕೆ ಬಂದು 1980ರ ಹೊತ್ತಿಗೆ ಅವು ಅಣಬೆಗಳಂತೆ ಸಾಕಷ್ಟು ಪ್ರಮಾಣದಲ್ಲಿ ಬೆಳೆದುಕೊಂಡವು. ಸ್ತ್ರೀ ಚಳುವಳಿಯು ಪ್ರಬಲವಾಗಿ ಬೆಳೆಯಬೇಕಾದರೆ ಅದರ ನಾಯಕತ್ವ ಸ್ವಾಯತ್ತತೆಯನ್ನು ಹೊಂದಿರಬೇಕು. ಏಕೆಂದರೆ ಸ್ತ್ರೀಯು ಯಾವುದೇ ನಿರ್ದಿಷ್ಟವಾದ ವರ್ಗ ಜಾತಿ ವರ್ಣಗಳ ಚೌಕಟ್ಟಿಗೆ ಸೀಮಿತವಾಗಿಲ್ಲ. ಆದಾಗ್ಯೂ ಪುರುಷರೊಂದಿಗೆ ಆಕೆ ಸತತವಾಗಿ ಜಾತಿವರ್ಗಗಳ ದಬ್ಬಾಳಿಕೆಗೆ ಒಳಗಾಗಿದ್ದಾಳೆ. ಸ್ತ್ರೀಯರು ಸೈದ್ಧಾಂತಿಕವಾಗಿ ಯಾವುದೇ ಸರಳ ಪರಿಕಲ್ಪನೆಗೆ ಬದ್ಧವಾಗಿಲ್ಲ ಬದಲಾಗಿ ಆಕೆ ಪರಕೀಯರಾಗಿ ಪ್ರತಿಯೊಂದು ಗ್ರಹಗಳಲ್ಲಿ ಕಟ್ಟುಪಾಡುಗಳಿಗೊಳಗಾಗಿ-ಸಮಾಜದ ವಿವಿಧ ಶ್ರೇಣಿಗಳಲ್ಲಿ ಛಿದ್ರಗೊಂಡು ಶೋಷಣೆಗೊಳಗಾಗಿದ್ದಾಳೆ. ಹೀಗಾಗಿ ಸ್ತ್ರೀಯು ಪುರುಷರೊಂದಿಗೆ ಸಾಮಾಜಿಕ ದಬ್ಬಾಳಿಕೆ ಜತೆ ಸ್ತ್ರೀಯಾಗಿ ಲೈಂಗಿಕ ತುಳಿತಕ್ಕೂ ಒಳಗಾಗಿ ಸಮಾಜದಲ್ಲಿ ಎರಡು ರೀತಿಯ ಶೋಷಣೆಗೊಳಗಾಗಿದ್ದಾಳೆ. ವಾಸ್ತವವಾಗಿ ಈವರೆಗೆ ಪ್ರಬಲವಾಗಿ ಬೆಳೆದ ಸ್ತ್ರೀ ಸಂಘಟನೆಗಳೆಲ್ಲಾ ಸ್ವಾಯತ್ತ ಸಂಸ್ಥೆಗಳೇ ಆಗಿವೆ. ಅವುಗಳ ನಾಯಕತ್ವದ ಸ್ವಾಯತ್ತತೆ ಉಳಿಯಬೇಕಾದರೆ ಸ್ತ್ರೀಯು ಯಾವುದೇ ಪೂರ್ವಕಲ್ಪಿತ ಸೈದ್ಧಾಂತಿಕ ಚೌಕಟ್ಟುಗಳಿಗೆ, ಸಂಘಟಿತ ಪಟ್ಟ ಭದ್ರ ನಾಯಕತ್ವದ ಬಾಲಂಗೋಚಿಯಾಗದೇ ಉಳಿದಾಗ ಮಾತ್ರ ಸಾಧ್ಯ. ಈ ಹಿನ್ನೆಲೆಯಲ್ಲಿ ಸ್ತ್ರೀ ಸಂಘಟನೆಗಳು ಕೇಂದ್ರೀಕೃತ ಶಕ್ತಿಯಾಗಿ ಮುಂಚೂಣಿಯನ್ನು ಎತ್ತಿ ಹಿಡಿಯಲು, ಸ್ವಾಯತ್ತ ಸಂಘಟನೆಗಳ ಮಾರ್ಗದರ್ಶನಕ್ಕಾಗಿ ಈ ಕೆಳಕಂಡ ವಿಚಾರಗಳನ್ನು ಚರ್ಚೆಗಾಗಿ ಮಂಡಿಸಲಾಗಿದೆ.

ಸ್ವಾಯತ್ತತೆ ಅನೇಕ ರೂಪಗಳಲ್ಲಿ ಸ್ಥಾಪಿತವಾಗಬೇಕಾದರೆ ಈ ಕೆಳಗಿನ ಅಂಶಗಳನ್ನು ಗಮನಿಸಬೇಕು.

1) ನಾಯಕತ್ವ
2) ಸೈಧ್ಧಾಂತಿಕತೆ (ಸ್ತ್ರೀಪರ ದೃಷ್ಟಿಕೋನ)
3) ಸಂಘಟನಾತ್ಮಕತೆ
4) ಆರ್ಥಿಕತೆ

ಸ್ವಾಯತ್ತ ಸ್ತ್ರೀ ಸಂಘಟನೆಗಳು ಲೈಂಗಿಕ ಸಮಾನತೆಗಾಗಿ, ಲೈಂಗಿಕ ನ್ಯಾಯಕ್ಕಾಗಿ ಮತ್ತು ಸ್ವಾತಂತ್ರ್ಯಕ್ಕಾಗಿ ಹೋರಾಡಿ 'ಸ್ತ್ರೀಗೆ ಸಮಾಜದಲ್ಲಿ ನ್ಯಾಯಬದ್ಧವಾಗಿ ದೊರೆಯಬೇಕಾದ ಸ್ಥಾನಕ್ಕಾಗಿ ಹೋರಾಡುತ್ತದೆ. ಸ್ತ್ರೀ ಸಂಘಟನೆಗಳು ಪಿತೃಪ್ರಧಾನ ಮೌಲ್ಯಗಳ ವ್ಯವಸ್ಥೆ ವಿರುದ್ಧ, ಹೆಣ್ಣಿನ ದೇಹವನ್ನು ವ್ಯಾಪಾರೀಗೊಳಿಸುತ್ತಿರುವ ಆಕ್ರಮಣಕಾರಿ ಬಳಕೆದಾರ ಸಂಸ್ಕೃತಿಯ ವಿರುದ್ಧ ಹೋರಾಡುತ್ತಾ ಬಂದಿವೆ. ಅಷ್ಟೇ ಅಲ್ಲದೆ ಸ್ತ್ರೀಯರ ವಿರುದ್ಧದ ಹಿಂಸೆ, ಪ್ರಜಾಸತ್ತೆ, ಜಾತ್ಯಾತೀತತೆ, ಸ್ತ್ರೀ ಸ್ವಾತಂತ್ರ್ಯಕ್ಕಾಗಿ ಮತ್ತು ಹಿಂಸೆಯಿಂದ ರಕ್ಷಣೆಗಾಗಿ ಹೋರಾಟಗಳನ್ನು ನಡೆಸುತ್ತವೇ ಬಂದಿವೆ. ಒಟ್ಟಿನಲ್ಲಿ ಹೇಳುವುದಾದರೆ ಇವುಗಳ ಗುರಿ ಹಾಲಿ ಅಸ್ಥಿತ್ವದಲ್ಲಿರುವ ಪಿತೃಪ್ರಧಾನ ಸಂಸ್ಕೃತಿಯನ್ನು ಸ್ಥಾನಪಲ್ಲಟಗೊಳಿಸಿ ಸ್ತ್ರೀಘಾದೀ ಪ್ರಜ್ಞೆಗಾಗಿ ಹೋರಾಡುವುದೇ ಆಗಿದೆ. ಸ್ತ್ರೀ ಸಂಘಟನೆಗಳು ವಿಕೇಂದ್ರಗೊಂಡು ಪ್ರಜಾತಂತ್ರಾತ್ಮಕ ಕಾರ್ಯವಿಧಾನ ಬಲಪಡಿಸಲು ಸಡಿಲವಾದ ಸಂಘಟನಾತ್ಮಕ ವ್ಯವಸ್ಥೆಯನ್ನು ಮೈಗೂಡಿಸಿಕೊಂಡಿವೆ. ಈ ಸಡಿಲವಾದ ವ್ಯವಸ್ಥೆಗೆ ಯಾವುದೇ ಶ್ರೇಣಿಕೃತ ವ್ಯವಸ್ಥೆಯನ್ನು ಇವು ಒಪ್ಪುವುದಿಲ್ಲ. ಯಾಕೆಂದರೆ ಎಲ್ಲಾ ಘಟ್ಟದಲ್ಲಿ ಸ್ವಾತಂತ್ರ್ಯವನ್ನು ಉಳಿಸುವುದೇ ಅವಳ ಹಂಬಲವಾಗಿದೆ. ಸ್ತ್ರೀ ಸಂಘಟನೆಗಳು ತಮ್ಮ ಆರ್ಥಿಕ ಸ್ವಾಯತ್ತತೆ ಉಳಿಸುವುದು, ಅದರ ಅಸ್ತಿತ್ವದ ಅಳಿವು - ಉಳಿವು ಪ್ರಶ್ನೆಯಾಗಿದೆ. ಯಾವುದೇ ಸರ್ಕಾರೀ ಅಥವಾ ಖಾಸಗೀ ಆರ್ಥಿಕ ಅವಲಂಬನೆ ಸ್ತ್ರೀ ಸಂಘಟನೆಗಳ ಸ್ವಾತಂತ್ರ್ಯವನ್ನು ಕಸಿದುಕೊಳ್ಳುತ್ತದೆ. ಹೀಗಾಗಿ ನಾವು ನಮ್ಮ ರಣನೀತಿ ಮತ್ತು ತಂತ್ರಗಳನ್ನು (ಕಾರ್ಯಯೋಜನೆ) ಮುಕ್ತವಾಗಿ ರೂಪಿಸಲು ಆರ್ಥಿಕ ಸ್ವಾವಲಂಬನೆ, ವಿಕೇಂದ್ರೀಕೃತ ಪ್ರಜಾಸತ್ತಾತ್ಮಕ ಸಂಘಟನಾ ಸ್ವರೂಪ ಹೊಂದಿ, ಸ್ತ್ರೀವಾದಿ ಸಿದ್ಧಾಂತಕ್ಕೆ ಬದ್ಧವಾದಾಗ ಮಾತ್ರ ಸಾಧ್ಯ. ಹೀಗಾದಾಗ ಮಾತ್ರ ಪಿತೃಪ್ರಧಾನ ವ್ಯವಸ್ಥೆ ವಿರುದ್ಧ ಹೋರಾಡಲು ಸ್ತ್ರೀ ಸಂಘಟನೆಗಳು ಒಂದು ಶಕ್ತಿಯಾಗಿ ಬೆಳೆಯಲು ಸಾಧ್ಯ.

ಮಹಿಳೆಯರು ಸಮಾಜದ ಒಂದು ಅಂಗ, ಅವರೇನು ಸಮಾಜದಲ್ಲಿ ಪ್ರತ್ಯೇಕವಾಗಿ ಬದುಕುತ್ತಿಲ್ಲ. ಹಾಗಾಗಿ

ಸ್ತ್ರೀ ಚಳುವಳಿಯೂ ಸಹ ಇತರ ಶೋಷಣೆಯ ವಿರುದ್ಧದ ಹೋರಾಟಗಳಾದ ದಲಿತ ಚಳುವಳಿ, ವರ್ಗ ಚಳುವಳಿ, ಪರಿಸರ ಚಳುವಳಿ, ನಾಗರೀಕ ಹಕ್ಕುಗಳಿಗಾಗಿ ಹೋರಾಟಗಳು ಮುಂತಾದ ಜನಪರ ಆಂದೋಲನಗಳ ಒಂದು ಅಭಿನ್ನ ಭಾಗವಾಗಿದೆ. ಈ ಸಂದರ್ಭದಲ್ಲಿ ವಿವಿಧ ಗುಂಪು, ಸಂಘಟನೆ ಮತ್ತು ಪಕ್ಷಗಳ ಜತೆ ನಮ್ಮ ಸಂಘಟನಾ ಸಂಬಂಧಗಳನ್ನು ಎಚ್ಚರಿಕೆಯಿಂದ ವ್ಯಾಖ್ಯಾನಿಸಬೇಕಾಗುತ್ತದೆ. ಈ ಹಿನ್ನೆಲೆಯಲ್ಲಿ ಎರಡು ಪ್ರಮುಖ ವಿಚಾರಗಳನ್ನು ಚರ್ಚಿಸಬಹುದು.

1. ಸರ್ಕಾರಿ ಮತ್ತು ಸರ್ಕಾರೇತರ ಸಂಸ್ಥೆಗಳೊಡನೆ ಸಂಬಂಧಗಳು.
2. ರಾಜಕೀಯ ಪಕ್ಷಗಳು ಅಥವಾ ಪ್ರಗತಿಪರ ಗುಂಪು, ಸಂಘಟನೆಗಳ ಜತೆ ಸಂಬಂಧ.

1. ಇತ್ತೀಚಿನ ದಶಕದಲ್ಲಿ ಮಹಿಳಾ ಚಳುವಳಿಗಳ ಹೆಚ್ಚುತ್ತಿರುವ ಬೇಡಿಕೆ ಮತ್ತು ಒತ್ತಾಯಗಳಿಗೆ ಪ್ರತಿಕ್ರಿಯೆಯಾಗಿ ಸರ್ಕಾರದ ನೀತಿ ಮತ್ತು ಕಾರ್ಯಕ್ರಮಗಳಲ್ಲಿ ಸ್ವಲ್ಪ ಬದಲಾವಣೆಗಳು ಕಂಡುಬಂದುವು. ಒಂದು ಕಡೆ, ಸರ್ಕಾರವು ಸ್ತ್ರೀಯರಿಗಾಗಿ ಕೆಲವು ಅಭಿವೃದ್ಧಿ ಕಾರ್ಯಕ್ರಮಗಳನ್ನು ಹಾಕಿಕೊಂಡರೆ — ಉದಾ: ದೇವದಾಸಿ ಪುನರ್ವಸತೀಕರಣ, ಕೊಳಗೇರಿ ನಿವಾಸಿಗಳ ಅಭಿವೃದ್ಧಿ, ಇತ್ಯಾದಿ, ಇನ್ನೊಂದು ಕಡೆ ಅನೇಕ ಸ್ತ್ರೀವಾದಿ ವಿಚಾರಗಳನ್ನು ಶೈಕ್ಷಣಿಕ ಪಠ್ಯಕ್ರಮಗಳಲ್ಲಿ ಸೇರಿಸಿ ಮಹಿಳಾ ಅಧ್ಯಯನ ಕೇಂದ್ರಗಳನ್ನು ಸ್ಥಾಪಿಸುವುದಾಗಿದೆ. ಇದರ ಜತೆಯಲ್ಲಿಯೇ 1980ರ ದಶಕದಲ್ಲಿ ಅನೇಕ ಸರ್ಕಾರೇತರ ಸ್ವಯಂ ಸೇವಾ ಸಂಸ್ಥೆಗಳೂ ಸಹ ಅಭಿವೃದ್ಧಿ ಕಾರ್ಯಕ್ರಮಗಳನ್ನು ರೂಪಿಸಿ ಸಮಾಜದ ಅತ್ಯಂತ ಕೆಳಸ್ತರಗಳಲ್ಲಿ ಕೆಲಸ ಮಾಡಲು ಸುರುಮಾಡಿವೆ. ಸರ್ಕಾರಿ ಅಥವಾ ಸರ್ಕಾರೇತರ ಸಂಘ ಸಂಸ್ಥೆಗಳು ಸಾಮಾನ್ಯವಾಗಿ "Empowerment of women" ಎಂಬ ಧ್ಯೇಯದೆಡೆ ಕಾರ್ಯರೂಪಿಸಿಕೊಂಡಿವೆ. ಸರ್ಕಾರದಿಂದ ಅನುದಾನಿತವಾಗಲಿ, ವಿದೇಶೀ ಅನುದಾನಿತ ಸಂಸ್ಥೆಗಳಾಗಲಿ, ಆರ್ಥಿಕವಾಗಿ ಅವಲಂಬಿತವಾದ್ದರಿಂದ ಅವು ಹಣ ಕೊಡುವವರ ಮರ್ಜಿಗೆ ಒಳಗಾಗಿ ಒಂದು ಚೌಕಟ್ಟಿನೊಳಗೆ ಕೆಲಸ ಮಾಡುವುದರಿಂದ ಇತಿಮಿತಗಳನ್ನು ಹೊಂದಿವೆ. ಈ ಹಿನ್ನೆಲೆಯಲ್ಲಿ ಹೆಚ್ಚು ಹೆಚ್ಚಾಗಿ ಆರ್ಥಿಕ ಸ್ವಾಯತ್ತ ಸಂಸ್ಥೆಗಳಾಗಲು ಇವು ಪ್ರಯತ್ನಿಸಬೇಕು. ಸ್ವಾಯತ್ತ ಮಹಿಳಾ ಸಂಸ್ಥೆಗಳು ಇಂತಹ ಆರ್ಥಿಕವಾಗಿ ಅವಲಂಬಿತ ಸಂಸ್ಥೆಗಳ ಜತೆ ಸಂಘಟನಾ ಸಂರಚನೆಯ ಮಟ್ಟದಲ್ಲಿ ಒಟ್ಟಾಗುವುದಕ್ಕಿಂತ, ಸಮಾನ ಸಮಸ್ಯೆಕ್ಕೆಗೆತ್ತಿ ಜಂಟಿ ಕಾರ್ಯಕ್ರಮಗಳನ್ನು ರೂಪಿಸಿ ಹೋರಾಡುವಲ್ಲಿ ಒಟ್ಟಾಗಬೇಕಾಗಿದೆ.

2. ಬಲಪಂಥೀಯ ರಾಜಕೀಯ ಪಕ್ಷಗಳು ವಾಸ್ತವವಾಗಿ ಮೂಲಭೂತವಾದಿಗಳಾಗಿದ್ದು ಧಾರ್ಮಿಕ ಮತ್ತು ಪಿತೃಪ್ರಧಾನ ಮೌಲ್ಯಗಳನ್ನು ಎತ್ತಿಹಿಡಿದು ಕೋಮುವಾದಿ ಸಂಸ್ಥೆಗಳಾಗಿವೆ. ಮಹಿಳಾ ಸ್ವಾಯತ್ತ ಸಂಸ್ಥೆಗಳು ಪ್ರಜಾಸತ್ತ, ಜಾತ್ಯಾತೀತತೆ ಮತ್ತು ಧರ್ಮ ನಿರಪೇಕ್ಷತೆಗಾಗಿ ಬದ್ಧವಾಗಿರುವುದರಿಂದ ಕೋಮುವಾದವನ್ನು ವಿರೋಧಿಸುತ್ತವೆ. ಹೀಗಾಗಿ ಪ್ರತಿಗಾಮಿ ದೃಷ್ಟಿಧೋರಣೆಗಳುಳ್ಳ ಬಲಪಂಥೀಯರ ಸಂಸ್ಥೆಗಳೊಡನೆ ಸಂಬಂಧ ಸರ್ವಥಾ ಸಾಧ್ಯವಿಲ್ಲ ಎಂದು ನಂಬಿಕೆ. ಇದರ ಬಗ್ಗೆ ಚರ್ಚೆ ಅಗತ್ಯ.

ಇನ್ನು ಎಡಪಂಥೀಯ ಪಕ್ಷಗಳು ಧರ್ಮನಿರಪೇಕ್ಷತೆ ಮತ್ತು ಪ್ರಜಾಸತ್ತೆಗಾಗಿ ಅನೇಕ ಹೋರಾಟಗಳನ್ನು ನಡಸುತ್ತಿವೆ. ಕೋಮುವಾದವನ್ನೂ ವಿರೋಧಿಸುತ್ತವೆ. ಅವುಗಳಿಗೆ ತಮ್ಮದೇ ಆದ ಪ್ರಣಾಲಿಕೆ, ಸಂಘಟನಾತ್ಮಕ ಶಿಸ್ತುಗಳಿವೆ. ಕೆಲವು ಉಗ್ರಗಾಮಿ ಎಡಪಕ್ಷಗಳು ಪ್ರಭುತ್ವದ ಭಯೋತ್ಪಾದನೆ ವಿರುದ್ಧ ಕ್ರಾಂತಿಕಾರಿ ಭಯೋತ್ಪಾದನೆಯನ್ನು ಎತ್ತಿಹಿಡಿಯುತ್ತವೆ. ವಾಮ ಪಕ್ಷಗಳ ಜತೆ ನಮ್ಮ ಸಂಬಂಧ ಹೇಗಿರಬೇಕು? ಪ್ರಭುತ್ವದ ಭಯೋತ್ಪಾದನೆ ಮತ್ತು ಉಗ್ರಗಾಮಿ ವಾಮ ಪಕ್ಷಗಳ ಕ್ರಾಂತಿಕಾರಿ ಭಯೋತ್ಪಾದನೆ ಬಗ್ಗೆ ನಮ್ಮ ನಿಲುವೇನು? ಸ್ವಾಯತ್ತತೆಯನ್ನು ಅಪೇಕ್ಷಿಸುತ್ತಿರುವ ಕಾನೂನಿನ ಚೌಕಟ್ಟಿನಲ್ಲಿ ಕಾರ್ಯಕ್ರಮಗಳನ್ನು ಹಮ್ಮಿಕೊತ್ತಿರುವ ನಮ್ಮ ಸಂಬಂಧ ಎಡಪಕ್ಷಗಳ ಜತೆ ಹೇಗಿರಬೇಕು ಎಂದು ಚರ್ಚೆಯಾಗಬೇಕು. ನಿರ್ದಿಷ್ಟ ಸಮಸ್ಯೆಗೆ ಸಂಬಂಧಿಸಿದಂತೆ ಅವುಗಳ ಜತೆ ಸೇರಬಹುದೆ?

ನಾಗರೀಕ ಹಕ್ಕಿಗಾಗಿ ಹೋರಾಡುತ್ತಿರುವ, ವಿಚಾರವಾದವನ್ನು ಪ್ರಚಾರ ಮಾಡುತ್ತಿರುವ, ಕೋಮು ಸೌಹಾರ್ದಕ್ಕೆ ಶ್ರಮಿಸುತ್ತಿರುವ, ಪರಿಸರ ರಕ್ಷಣೆ, ಬಳಕೆದಾರರ ಹಿತರಕ್ಷಣೆ ಮುಂತಾದ ಪ್ರಗತಿಪರ ಗುಂಪುಗಳ ಜತೆ ನಮ್ಮ ಸಂಬಂಧ ಹೇಗಿರಬೇಕು? ಹಿಂದೆ ನಾವು

ಇವುಗಳೊಡನೆ ಜಂಟಿ ಕಾರ್ಯಕ್ರಮಗಳಲ್ಲಿ ಭಾಗವಹಿಸಿದಂತೆ ಮುಂದೂ ಭಾಗವಹಿಸಬಹುದೆ ?

**ಕಾರ್ಯಕ್ರಮ**

ಸ್ತ್ರೀ ವಿಮೋಚನೆಯ ಆಧಾರ ಸ್ತಂಭ (ತಿರುಳು) ಸಮಾನತೆ, ನ್ಯಾಯ ಮತ್ತು ಸ್ವಾತಂತ್ರ್ಯ ಇವನ್ನು ಗಳಿಸಿದಾಗ ಮಾತ್ರ ಸ್ತ್ರೀಯರು ಆತ್ಮಗೌರವ ಪಡೆದು ಸಾಮಾಜಿಕ ಮಾನ್ಯತೆಯನ್ನು ಪಡೆಯಲು ಸಾಧ್ಯ. ಸಂಕ್ಷಿಪ್ತವಾಗಿ ಹೇಳುವುದಾದರೆ ಮಹಿಳಾ ಚಳುವಳಿಯ ಆದ್ಯತೆಗಳು ಈ ಕೆಳಕಂಡಂತೆ ಇವೆ.

**ಸ್ವಾಯತ್ತ**

* ಇಂದಿನ ಪುರುಷಪ್ರಧಾನ ಮೌಲ್ಯಗಳ ವ್ಯವಸ್ಥೆಯ ವಿರುದ್ಧ ಹೋರಾಟ.
* ಕೊಳೆಯುತ್ತಿರುವ Consumer (ಬಳಕೆದಾರರ) ಸಂಸ್ಕೃತಿಯ ವಿರುದ್ಧ ಹೋರಾಟ.
* ಸ್ತ್ರೀ ತನ್ನ ದೇಹದ ಮೇಲಿನ ಹಕ್ಕನ್ನು ಸ್ಥಾಪಿಸುವಂಥ ಹೋರಾಟ.
* ಸ್ತ್ರೀ ವಿರುದ್ಧದ ಎಲ್ಲಾ ರೀತಿಯ ಹಿಂಸೆಯ ವಿರುದ್ಧ ಪ್ರತಿರೋಧ ಸಂಘಟಿಸುವುದು. ಅದಕ್ಕಾಗಿ ಮೊಟ್ಟ ಮೊದಲು ಮಹಿಳೆಗೆ ರಕ್ಷಣೆಯನ್ನು ನೀಡುವುದು.

ಮೇಲಿನ ವಿಷಯಗಳಿಗೆ ಸಂಬಂಧಿಸುವಂತೆ ವಿವಿಧ ಆಯಾಮಗಳನ್ನು ಹೊಂದಿಕೊಂಡಂತೆ ಒಂದು ರಚನಾತ್ಮಕ ಕಾರ್ಯಕ್ರಮವನ್ನು ಹಮ್ಮಿಕೊಳ್ಳುವುದು ಅಗತ್ಯ.

**ಕಾರ್ಯಕ್ರಮ**

**1. ಸತ್ಯಶೋಧ ತಂಡಗಳ ರಚನೆ**

ಸ್ತ್ರೀಯರ ವಿರುದ್ಧದ ದಬ್ಬಾಳಿಕೆಯ ಅಧ್ಯಯನದಿಂದ ಅರಿವಿನ ಮಟ್ಟವನ್ನು ಉತ್ತಮಪಡಿಸಲು ಮತ್ತು ನ್ಯಾಯಕ್ಕಾಗಿ ಒಗ್ಗೂಡಿ ಹೋರಾಟ ನಡೆಯುವಲ್ಲಿ ಸತ್ಯಶೋಧ ತಂಡಗಳ ಪಾತ್ರ ಬಹಳ ಮುಖ್ಯ. ಸ್ಥಳೀಯ ಮಹಿಳಾ ಸಂಘಗಳು ಸಂದರ್ಭಾನುಗುಣವಾಗಿ ಇಂತಹ ತಂಡಗಳ ಅಗತ್ಯವನ್ನು ಮನಗಂಡಾಗ ವಿವರವಾದ ತನಿಖೆಯನ್ನು ಕೈಗೊಳ್ಳಲು ತಂಡದ ರಚನೆಯಾಗಬೇಕು. ಉದಾಹರಣೆಗಾಗಿ ಸತ್ಯಶೋಧ ತಂಡಗಳು Custodial rape issue, ವರದಕ್ಷಿಣಾ ಪ್ರಕರಣಗಳಲ್ಲಿ ಅಗತ್ಯ.

**2. ವಿಮರ್ಶಾತ್ಮಕ ಅಧ್ಯಯನ ಕೂಟಗಳು**

ಸ್ತ್ರೀಪರ ದೃಷ್ಟಿಕೋನದಿಂದ ಮಹಿಳೆಗೆ ಸಂಬಂಧಿಸಿದಂತೆ ಇರುವ ಸರ್ಕಾರದ ಎಲ್ಲಾ ನೀತಿ ಮತ್ತು ಕಾರ್ಯಕ್ರಮಗಳ ಆಳವಾದ ಮತ್ತು ವಿಮರ್ಶಾತ್ಮಕ ಅಧ್ಯಯನವಾಗಬೇಕು. ಸ್ತ್ರೀಪರ ಕಾಳಜಿಯನ್ನು ಹೊಂದಿರುವ ಪರಿಣಿತ ಗುಂಪುಗಳಿಂದ ಇಂತಹ ಸರ್ಕಾರಿ ಕಾರ್ಯಕ್ರಮಗಳ ವಿಶ್ಲೇಷಣೆ ಮತ್ತು ವಿಮರ್ಶೆಯಾಗಬೇಕು. ಮಹಿಳೆಗೆ ಸಂಬಂಧಿಸಿದ ಕಾರ್ಯಕ್ರಮಗಳನ್ನು ರೂಪಿಸುವಾಗ ಇಂತಹ ತಂಡಗಳ ಅಭಿಪ್ರಾಯವನ್ನು ತೆಗೆದುಕೊಳ್ಳುವಂತೆ ಸರ್ಕಾರವನ್ನು ಒತ್ತಾಯಿಸಬೇಕು.

**3. ಮಹಿಳೆಯ ಆತ್ಮಗೌರವಕ್ಕೆ ಸಂಬಂಧಿಸಿದಂತೆ ಅವಳು ಮಾಡುವ** ಮನೆಗೆಲಸಕ್ಕೆ ಆದ್ಯತೆಯನ್ನು ನೀಡಲು ಹಾಗೂ ವೇತನದ ನೀಡಿಕೆಯಲ್ಲಿ ಸಮಾನತೆಯನ್ನು ಸ್ಥಾಪಿಸಲು ಒಟ್ಟಾರೆ ಕುಟುಂಬ ಜೀವನದಲ್ಲಿ ಕ್ರಾಂತಿಕಾರಿ ಬದಲಾವಣೆ ಅಗತ್ಯ. ಇದಕ್ಕಾಗಿ ಸಂಘಟಿತ ಹೋರಾಟವನ್ನು ರೂಪಿಸುವುದು.

**ಸಮಾನ ಸಿವಿಲ್ ಕಾಯಿದೆಗಾಗಿ ಒತ್ತಾಯ**

ಧರ್ಮದ ಹೆಸರಿನಲ್ಲಿ ವಿವಾಹ, ಆಸ್ತಿಹಕ್ಕು, ವಿಚ್ಛೇದನ ಮುಂತಾದ ವಿಚಾರಗಳಿಗೆ ಸಂಬಂಧಿಸಿದಂತೆ ಮಹಿಳೆಯ ಮೇಲೆ ದೌರ್ಜನ್ಯ ನಡೆಯುತ್ತಿದೆ. ಇದರ ವಿರುದ್ಧ ಆಗಾಗ್ಗೆ ಪ್ರತಿಭಟನೆಗಳು ಕೇಳಿಬಂದಾಗ ಆ ದೌರ್ಜನ್ಯಗಳನ್ನು ಧರ್ಮದ ಹೆಸರಿನಲ್ಲಿ ಸಮರ್ಥಿಸಲಾಗುತ್ತದೆ. ಇದನ್ನು ತಡೆಯಬೇಕಾದರೆ ದೇಶದಾದ್ಯಂತ ಎಲ್ಲರಿಗೂ ಅನ್ವಯಿಸುವ ಸಮಾನ ಸಿವಿಲ್ ಕಾಯಿದೆಯ ಅಗತ್ಯವಿದೆ. ಈ ಕಾಯಿದೆಯನ್ನು ಕಡ್ಡಾಯವಾಗಿ ಜಾರಿಗೆ ತರಲೇಬೇಕೆಂದು ಒತ್ತಾಯಿಸುವ ಚಳುವಳಿಯನ್ನು ಮಹಿಳಾಪರ ಹೋರಾಟವನ್ನು ನಡೆಸಬೇಕಾಗಿದೆ. ಸಮಾನ ಸಿವಿಲ್ ಸಂಹಿತೆಯ ಜಾರಿಗಾಗಿ ಕಾರ್ಯಕ್ರಮದಿಂದ ಪುರುಷ ಪ್ರಧಾನತೆ ಮತ್ತು ಮೂಲಭೂತ ವಾದದಿಂದ ದಮನಕ್ಕೊಳಗಾಗುವ ಮಹಿಳೆಯನ್ನು ರಕ್ಷಿಸಲು ಪ್ರಜಾಸತ್ತೆಯನ್ನು ಹಾಗೂ ಜಾತ್ಯಾತೀತತೆಯನ್ನು ಸ್ಥಾಪಿಸಲು ಸಾಧ್ಯ.

**4. ರಾಜ್ಯಮಟ್ಟದ ಚಳುವಳಿಗೆ ವಿಚಾರಗಳನ್ನು ಗುರುತಿಸಿ ಚಳುವಳಿಯನ್ನು ರೂಪಿಸುವುದು**

ಈ ದಿಸೆಯಲ್ಲಿ ಸಮಾವೇಶಗಳನ್ನು ನಡೆಸುವುದು (ವರ್ಷಕ್ಕೆ ಒಂದು ಅಥವ ಎರಡು ಬಾರಿ) ಸಮಾವೇಶ ಅಥವಾ ವಿಚಾರಸಂಕಿರಣಗಳಿಗೆ ವಿಷಯಗಳು

* ಮೂಲಭೂತವಾದ ಮತ್ತು ಸ್ತ್ರೀಯರ ಪ್ರಜಾಪ್ರಭುತ್ವವಾದ ಹಕ್ಕು.
* ಕುಡಿತದ ವಿರುದ್ಧದ ಹೋರಾಟ.
* ವರದಕ್ಷಿಣೆ ವಿರುದ್ಧದ ಹೋರಾಟ. ಅಥವಾ ಮಹಿಳೆಯರ ಬದುಕಿನ ಮೇಲೆ ಪ್ರತ್ಯಕ್ಷ ಅಥವಾ ಪರೋಕ್ಷ ಪ್ರಭಾವ ಬೀರುವ ಯಾವುದೇ ವಿಚಾರವಾಗಿರಬಹುದು.

**5. ಸಂಪರ್ಕ : ಸ್ಥಳೀಯ — ರಾಜ್ಯಮಟ್ಟ**

ರಾಜ್ಯಮಟ್ಟದಲ್ಲಿ ಪರಿಣಾಮಕಾರಿ ಕೆಲಸವಾಗಬೇಕಾದರೆ ಸ್ಥಳೀಯ ಮಹಿಳಾ ಸಂಘಗಳ ಚಟುವಟಿಕೆಗಳಿಗೆ ಪ್ರಚಾರ ದೊರೆಯಬೇಕು. ಇದಕ್ಕಾಗಿ ಈಗಾಗಲೇ ಪ್ರಕಟವಾಗುತ್ತಿರುವ ಸ್ತ್ರೀಪರ ಪತ್ರಿಕೆಗಳಲ್ಲಿ (ಮಾನಸ, ಅಚಲ ಇತ್ಯಾದಿ) ಸ್ಥಳೀಯ ಮಹಿಳಾ ಸಂಘಟನೆಯ ಚಟುವಟಿಕೆಗಳ ಬಗ್ಗೆ ವರದಿಗಳು ಬರಬೇಕು. ಇಂತಹ ವರದಿಗಳು ಮೂರು ತಿಂಗಳಿಗೊಮ್ಮೆ ಕಡ್ಡಾಯವಾಗಿ ಪ್ರಕಟವಾಗಬೇಕು. ಇದರಿಂದ ಸ್ಥಳೀಯ ಸಂಘಟನೆಗಳಿಗೆ ಉತ್ತೇಜನ ದೊರೆತು ಅವುಗಳ ಶಕ್ತಿಯೂ ಹೆಚ್ಚುತ್ತದೆ. ಈ ರೀತಿ ಸ್ಥಳೀಯ ಮಟ್ಟದಲ್ಲಿ ಪ್ರಾರಂಭವಾದ ಸ್ತ್ರೀಪರ ಚಟುವಟಿಕೆಗಳು ರಾಜ್ಯಮಟ್ಟದಲ್ಲಿಯೂ ಮುಂದುವರೆಯಬೇಕು. ಸ್ಥಳೀಯ ಸಂಘಟನೆಗಳಿಗೆ ಬೆಂಬಲ ದೊರೆತರೆ ಇನ್ನೂ ವ್ಯಾಪಕವಾದ ಹೋರಾಟಕ್ಕೆ ಅದು ಮಾರ್ಗವಾಗುತ್ತದೆ.

ಇಂತಹ ಕನಿಷ್ಠ ಕಾರ್ಯಕ್ರಮವನ್ನು ಹಮ್ಮಿಕೊಂಡು ಕೆಲಸ ಮಾಡಿದರೆ ಒಂದು ರಾಜ್ಯಮಟ್ಟದ ಒತ್ತಡದ ಕೂಟವಾಗಿ ಬೆಳೆಯಲು ಸಾಧ್ಯ.

○ **ಇ. ರತಿರಾವ್**
ಕರ್ನಾಟಕ ಮಹಿಳಾ ವೇದಿಕೆ

---

**ದಶಕ ತುಂಬಿದಾಗ....**

(15ನೇ ಪುಟದಿಂದ)

ಸ್ಪಂದಿಸಿ ಹಣ ಕಳಿಸಿದ್ದಾರೆ. ಚಂದಾ ಅವಧಿ ಮುಗಿದ ತಿಂಗಳಿನಲ್ಲಿ ಸಕಾಲದಲ್ಲಿ ಎಲ್ಲಾ ಓದುಗರು ನವೀಕರಿಸಿದರೆ ಪತ್ರಿಕೆಯ ಪ್ರಕಟನೆಗೆ ಹೆಚ್ಚು ಉಪಯುಕ್ತವಾಗುತ್ತದೆ. ಕೆಲವರು ಒಂದೆರಡು ತಿಂಗಳ ನಂತರ, ಮತ್ತೆ ಕೆಲವರು ನವೀಕರಿಸದೆ ಮೌನರಾಗಿಬಿಡುತ್ತಾರೆ. ಸಕಾಲದಲ್ಲಿ ನವೀಕರಣ ಹಾಗೂ ಪತ್ರಿಕೆಯನ್ನು ಇತರ ಆಸಕ್ತ ಓದುಗರಿಗೆ ಪರಿಚಯಿಸಿದರೆ ಪತ್ರಿಕೆಯ ಪ್ರಸಾರವೂ ಹೆಚ್ಚುತ್ತದೆ.

1994ರಲ್ಲಿ ಓದುಗರಿಗೆ ವಿಶೇಷ ಸಂಚಿಕೆಯನ್ನು ಸೇರಿದಂತೆ ಒಟ್ಟು 11 ಸಂಚಿಕೆಗಳನ್ನು ನೀಡಿದ್ದೇವೆ. ಪತ್ರಿಕೆಯ ಪ್ರಕಟಣೆಗೆ ಹಣಾ ಸಂಗ್ರಹಿಸುವುದು ನಮ್ಮ ಸ್ವಾಯತ್ತತೆಯನ್ನು ಕಾಪಾಡಿಕೊಳ್ಳುವ ಒಂದು ರಾಜಕೀಯ ಚಟುವಟಿಕೆ ಹಾಗೂ ನಮ್ಮ ಸಾಮಾಜಿಕ ಕಾಳಜಿಯ ವಿಸ್ತರಣೆಯೆಂಬ ತಾತ್ವಿಕ ನಂಬಿಕೆಯೆಂದು ನಾವು ಭಾವಿಸಿದ್ದೇವೆ. ಓದುಗರು 94ಕ್ಕೆ ನೀಡಿದ ಸಹಕಾರ ಹಾಗೂ ಪ್ರೋತ್ಸಾಹವನ್ನು ಇನ್ನೂ ಹೆಚ್ಚಿನ ರೀತಿಯಲ್ಲಿ ನೀಡಬೇಕೆಂಬುದು ನಮ್ಮ ಕಳಕಳಿಯ ಮನವಿ.

**—ಸಂಪಾದಕೀಯ ಮಂಡಳಿ**

# ಸಮತಾ ವೇದಿಕೆ

**ಪ್ರಗತಿಪರ ಮಹಿಳಾ ಸಂಘಟನೆ**
487, 'ಪ್ರೀತಿ', ಕುವೆಂಪುನಗರ
ಮೈಸೂರು-570 023

ಗೆಳತಿಯರಿಗೆ,

ಕಳೆದ ಡಿಸೆಂಬರ್ 10 ಮತ್ತು 11ರಂದು ಮೈಸೂರಿನಲ್ಲಿ ಯೋಜಿಸಿದ ರಾಜ್ಯಮಟ್ಟದ ಸಮಾವೇಶದಲ್ಲಿ ಸ್ವಾಯತ್ತ ಸಂಘಟನೆಗಳ ನಡುವೆ ಸಂಪರ್ಕ ಬಲಗೊಳ್ಳಬೇಕೆಂಬುದನ್ನು ಒಪ್ಪಿದ 'ಕರ್ನಾಟಕ' ಮಹಿಳಾ ವೇದಿಕೆ'ಯು 1995ರ ಅಂತರಾಷ್ಟ್ರೀಯ ಮಹಿಳಾ ದಿನಾಚರಣೆಯ ಪ್ರಯುಕ್ತ ಕೆಲವು ಕಾರ್ಯಕ್ರಮಗಳನ್ನು ತುರ್ತಾಗಿ ಹಮ್ಮಿಕೊಳ್ಳಬೇಕೆಂದು ನಿರ್ಧರಿಸಿ ಈ ಜವಾಬ್ದಾರಿಯನ್ನು ಸಮತಾ ವೇದಿಕೆಗೆ ವಹಿಸಿತ್ತು. ಆ ಸಂದರ್ಭದಲ್ಲಿ ಸೂಚಿಸಲಾದ ಹಲವು ಕಾರ್ಯಕ್ರಮಗಳಲ್ಲಿ ಎರಡು ವಿಷಯಗಳಿಗೆ ಸಂಬಂಧಿಸಿದ ಹಾಗೆ ಕರಪತ್ರಗಳನ್ನು ಈ ಪತ್ರದೊಡನೆ ಕಳುಹಿಸುತ್ತಿದ್ದೇವೆ. ಸರ್ಕಾರಿ ಉದ್ಯೋಗಗಳಲ್ಲಿ ಮಹಿಳೆಯರಿಗೆ ಶೇಕಡಾ ಮೂವತ್ತು ಮೀಸಲಾತಿಯನ್ನು ನೀಡುವ ಕಾಯಿದೆಯ ಜಾರಿಗೆ ಒತ್ತಾಯ ಮತ್ತು ಕುಡಿತದ ನಿಷೇಧ ಕಾಯಿದೆಯನ್ನು ಜಾರಿಗೆ ತರಲು ಒತ್ತಾಯ. ಈ ಎರಡು ವಿಷಯಗಳಿಗೆ ಸಂಬಂಧಿಸಿದಂತೆ ವ್ಯಾಪಕವಾಗಿ ರಾಜ್ಯಾದ್ಯಂತ ಸಹಿ ಸಂಘಟನಾ ಕಾರ್ಯಕ್ರಮವನ್ನು ಕರ್ನಾಟಕ ವೇದಿಕೆಯು ಹಮ್ಮಿಕೊಂಡಿದೆ. ಈ ಕಾರ್ಯಕ್ರಮವನ್ನು ಯಶಸ್ವಿಗೊಳಿಸುವಲ್ಲಿ ತಾವು ಈ ಕೆಳಗೆ ಸೂಚಿಸಿರುವ ಹಲವು ಕಾರ್ಯಕ್ರಮಗಳನ್ನು ಕೈಗೊಳ್ಳಬೇಕೆಂದು ಈ ಮೂಲಕ ವಿನಂತಿಸಿಕೊಳ್ಳುತ್ತೇವೆ.

1. ವಿಕೇಂದ್ರಿಕೃತ ರೀತಿಯಲ್ಲಿ ವ್ಯಾಪಕ ಸಹಿಸಂಗ್ರಹಣ ಕಾರ್ಯಕ್ರಮ ನೆರವೇರಲು ಕರಪತ್ರಗಳ Xerox ಪತ್ರಗಳನ್ನು ಮಾಡಿ ತಾಲ್ಲೂಕು ಪಂಚಾಯಿತಿ ಮಟ್ಟದ ಮಹಿಳಾ ವೇದಿಕೆಗಳನ್ನು ಸಂಪರ್ಕಿಸಿ, ಸಹಿ ಸಂಗ್ರಹಿಸುವುದು.

2. ಸಹಿ ಸಂಗ್ರಹಣಾ ಕಾರ್ಯಕ್ರಮದ ಅಂತ್ಯದಲ್ಲಿ ಕರಪತ್ರದ (ಸಹಿ ಸಮೇತ) ಮೂರು Xerox ಪ್ರತಿಗಳನ್ನು ಪಡೆಯುವುದು.

3. ಒಂದು ಪ್ರತಿಯನ್ನು ಮುಖ್ಯಮಂತ್ರಿಗಳವರಿಗೆ ಅಂತರಾಷ್ಟ್ರೀಯ ಮಹಿಳಾ ದಿನವಾದ ಮಾರ್ಚಿ 8 ರಂದು ತಲುಪುವಂತೆ, ಮಾರ್ಚಿ 5ರಂದು (ಅನಂತರವೂ) ಅಂಚೆಗೆ ಹಾಕುವುದು ಮತ್ತು ಸ್ಥಳೀಯ ಜಿಲ್ಲಾಧಿಕಾರಿ/ಪಂಚಾಯತ್ ಛೇರ್ಮನ್‌ರಿಗೆ ಸಲ್ಲಿಸುವುದು.

4. ಎರಡನೇಯ ಪ್ರತಿಯನ್ನು ಸಮತಾವೇದಿಕೆಗೆ ತಲುಪಿಸುವುದು.

5. ಮೂರನೇ ಪ್ರತಿಯನ್ನು ತಮ್ಮ ಸಂಘಟನೆಯ ಪ್ರತಿ ಎಂದು ಇಟ್ಟುಕೊಳ್ಳುವುದು ಹಾಗೂ ವ್ಯಾಪಕ ಪ್ರಚಾರಕ್ಕಾಗಿ ವರದಿಯನ್ನು ದಿನಪತ್ರಿಕೆಗಳಲ್ಲಿ ಪ್ರಕಟಿಸುವುದು.

6. ಲಗತ್ತಿಸಿರುವ ಲೆಟರ್‌ಹೆಡ್‌ಅನ್ನು ಜರಾಕ್ಸ್ ಮಾಡಿಕೊಂಡು ಸಹಿ ಸಂಗ್ರಹಿಸುವುದು.

ಅನಿವಾರ್ಯ ಕಾರಣಗಳಿಂದ ತಮ್ಮನ್ನು ಈ ಮೊದಲೇ ಸಂಪರ್ಕಿಸಲಾಗಲಿಲ್ಲ. ಸಹಿ ಸಂಗ್ರಹಣ ಕಾರ್ಯಕ್ರಮ ಯಶಸ್ವಿಯಾಗಲೆಂದು ಹಾಗೂ ರಾಜ್ಯಾದ್ಯಂತ ಕುಡಿತದ ವಿರುದ್ಧ ಮಹಿಳೆಯರ ಒಕ್ಕೊರಲಿನ ದನಿ ಮೊದಲ ಬಾರಿಗೆ ದಾಖಲೆ ಆಗುವಲ್ಲಿ ಶ್ರಮಿಸೋಣ.

---

**ಒಂದು ಸೂಚನೆ :**

ಕಳೆದ ಸಂಚಿಕೆ (ಡಿಸೆಂಬರ್ 1994)ಯಲ್ಲಿ ಪ್ರಕಟವಾದ "ರೋಜಾ ಮತ್ತು ಭಾರತೀಯ ರಾಷ್ಟ್ರೀಯತೆ' ಎನ್ನುವ ಅನುವಾದಿತ ಲೇಖನದಲ್ಲಿ ಕೆಲವು ತಪ್ಪುಗಳು ಉಳಿದುಬಿಟ್ಟಿವೆ. ದಯವಿಟ್ಟು ಈ ಕೆಳಕಂಡಂತೆ ತಿದ್ದಿಕೊಂಡು ಓದಿಕೊಳ್ಳಿ.

ಮುನ್ನುಡಿ, ಪುಟ 4ರ 4ನೇ ಸಾಲು, ಪುಟ 5ರ 20ನೇ ಸಾಲುಗಳಲ್ಲಿ 'ಮಹಿಳೆಯರ ಆಧುನೀಕರಣ' ಎಂದಿರುವುದನ್ನು 'ಅಧೀನೀಕರಣ' ಎಂದು ಓದಿಕೊಳ್ಳಿ. ಹಾಗೆಯೇ ಮುನ್ನುಡಿಯ ಕೊನೆಯ ಸಾಲನ್ನು "ಕುಟುಂಬಗಳಿಗಿನ ಅಧಿಕಾರದ ಪುನರ್‌ಸ್ಥಾಪನೆಗೆ ಇಂಬುಕೊಡುವಂತದ್ದು ಎನ್ನುವಲ್ಲಿ ಪುಕೋನ ವಿಚಾರವನ್ನು ಇಲ್ಲಿಗೆ ಅನ್ವಯಿಸಿರುವ ಅವರ ರೀತಿ ಕುತೂಹಲಕಾರಿಯಾದದ್ದು" ಎಂದು ಓದಿಕೊಳ್ಳಿ.

# ಕರ್ನಾಟಕ ಮಹಿಳಾ ವೇದಿಕೆ

## ಸ್ವಾಯತ್ತ ಮಹಿಳಾ ಸಂಘಟನೆಗಳ ರಾಜ್ಯಮಟ್ಟದ ಒಕ್ಕೂಟ

ಮಾನ್ಯರೆ,

**ವಿಷಯ** : ಮಧ್ಯ ಮಾರಾಟ ಹಾಗೂ ಅದರ ಬಳಕೆಯ ನಿಷೇಧ ಕಾಯಿದೆಯನ್ನು ಜಾರಿಗೆ ತರುವುದು.

ಈ ಕೆಳಗೆ ಸಹಿಮಾಡಿರುವ ನಾವು ತಮ್ಮಲ್ಲಿ ಕಳಕಳಿಯಿಂದ ವಿನಂತಿಸುವುದೇನೆಂದರೆ ತಮ್ಮ ಸರಕಾರ ಜನಪರವಾದ ಸರಕಾರವಾಗಿದ್ದು, ಜನಹಿತ ವಿರೋಧಿಯಾದ ಯಾವುದೇ ವಿಚಾರವನ್ನು ತಮ್ಮ ಗಮನಕ್ಕೆ ತಂದಲ್ಲಿ ಸೂಕ್ತ ಕ್ರಮ ಕೈಗೊಳ್ಳುವಲ್ಲಿ ಯಾವುದೇ ಹಿತಾಸಕ್ತಿಗಳ ಒತ್ತಡಕ್ಕೆ ಮಣಿದು ಹಿಂಜರಿಯುವುದಿಲ್ಲವೆಂದು ಭಾವಿಸಿ, ಮಧ್ಯಪಾನ-ನಿರೋಧ ಜಾರಿಗೊಳಿಸುವಂತೆ ಈ ಮೂಲಕ ಒತ್ತಾಯಿಸುತ್ತಿದ್ದೇವೆ.

ಇದುವರೆಗೆ ಆಡಳಿತ ನಡೆಸಿದ ಸರಕಾರಗಳು ಒಂದೆಡೆ ಬಡಜನರ ಏಳಿಗೆಗಾಗಿ ಹಲವಾರು ಕಲ್ಯಾಣ ಕಾರ್ಯಕ್ರಮಗಳನ್ನು ಹಾಕಿಕೊಂಡು ಅವುಗಳಿಗೆ ಪ್ರಚಾರ ಕೊಡುತ್ತಿದ್ದು, ಇನ್ನೊಂದೆಡೆ ಮದ್ಯದಂಗಡಿಗಳನ್ನು ಹಳ್ಳಿಹಳ್ಳಿಗಳಲ್ಲಿ, ಗಲ್ಲಿಗಲ್ಲಿಗಳಲ್ಲಿ ತೆರೆಯಲು ಪರವಾನಗಿ ಕೊಡುವ ಮೂಲಕ ಮದ್ಯಮಾರಾಟಗಾರರನ್ನು ಮದ್ಯ ತಯಾರಕರ ಕಲ್ಯಾಣವನ್ನೇ ಬಯಸುತ್ತಾ ಬಂದಿವೆ. ಬಡವರ ಉದ್ಧಾರವನ್ನೆ ಗುರಿಯಾಗಿಟ್ಟುಕೊಂಡಿದೆ ಎಂದು ಸಾರಿಕೊಳ್ಳುತ್ತಿರುವ ಸರ್ಕಾರದ ಹೇಳಿಕೆ ಒಂದು ಕಡೆ, ಈ ಮದ್ಯಪಾನ ನೀತಿಯಿಂದ ಶೋಷಣೆಗೊಳ್ಳುತ್ತಿರುವ ಅಧಿಕ ಸಂಖ್ಯೆಯ ಬಡ ಕುಟುಂಬಗಳು ಒಂದು ಕಡೆ ಇಲ್ಲಿ ಬಡಜನರ ಹಿತಾಸಕ್ತಿಗಿಂತ ಮಧ್ಯ ತಯಾರಕರಿಂದ ಬರುವ ದೊಡ್ಡ ಮೊತ್ತದ ಹಣದ ಕಡೆಯೇ ಆಸಕ್ತಿ ಇರುವುದು ಎದ್ದು ಕಾಣುತ್ತಿದ್ದು, ಇದು ಸರ್ಕಾರದ ದ್ವಿಮುಖ ನೀತಿಯ ದ್ಯೋತಕವಾಗಿದೆ. ಕಾರಣ ಬಡ ಜನರಿಗಾಗಿ ಕಲ್ಯಾಣ ಕಾರ್ಯಕ್ರಮಗಳನ್ನು ಹಾಕಿಕೊಳ್ಳುತ್ತಾ ಅವರನ್ನು ಮದ್ಯದಂಗಡಿಗಳನ್ನು ಹೆಚ್ಚುಹೆಚ್ಚು ತೆಗೆಯುವ ಮೂಲಕ ಕುಡಿಯಲು ಪ್ರೋತ್ಸಾಹಿಸುತ್ತಿರುವುದು ಸ್ಪಷ್ಟವಾಗಿದೆ. ಇದರಿಂದ ಹಲವು ಕುಟುಂಬಗಳು ಒಡೆದು ಚೂರುಚೂರಾಗಿವೆ. ಮಕ್ಕಳು ಮಹಿಳೆಯರ ಮೇಲೆ ಇದರ ದುಷ್ಪರಿಣಾಮಗಳನ್ನು ಕಾಣುತ್ತಿದ್ದೇವೆ. ಕುಡಿತದಿಂದುಂಟಾಗುವ ದಾರಿದ್ರ್ಯದಿಂದ ಅಪೌಷ್ಟಿಕತೆ, ಅನಾರೋಗ್ಯ, ಅನಕ್ಷರತೆ, ಕಲುಷಿತ ಪರಿಸರದ ಪ್ರಭಾವ ಮುಂತಾದುವುಗಳ ಪರಿಣಾಮ ಮಕ್ಕಳ ಮೇಲಾಗುತ್ತಿದ್ದು, ಅವರ ಭವಿಷ್ಯ ಜೀವನ ಕತ್ತಲುಮಯವಾಗುತ್ತಿದ್ದರೆ, ಮಹಿಳೆಯರು ಕುಡಿತದ ಚಟಕ್ಕೆ ಬಲಿಯಾದ ಪುರುಷರಿಂದ ಮಾನಸಿಕ-ದೈಹಿಕ ಹಿಂಸೆ ಬಡತನದ ದಳ್ಳುರಿಗೆ ಬಲಿಯಾಗುತ್ತಿದ್ದಾರೆ. ಈ ಹೇಳಿಕೆಗೆ ಸಾಕಷ್ಟು ಅಂಕಿ ಅಂಶಗಳ ಪುರಾವೆಯನ್ನು ಒದಗಿಸುವುದು ಸಾಧ್ಯವಿದೆ. ಇತ್ತೀಚೆಗೆ ಶಾಲಾ-ಕಾಲೇಜುಗಳ ಮಕ್ಕಳೂ ಈ ಚಟಕ್ಕೆ ಬಲಿಯಾಗುತ್ತಿರುವುದನ್ನು ಕಂಡಾಗ ಸರಕಾರ ಹೆಂಡದ ದೊರೆಗಳ ಹಣ ಆಮಿಷಗಳಿಗೆ ಇನ್ನು ಮುಂದೆಯೂ ಬಲಿಯಾಗದೆ, ತನ್ನ ಜನಪರ ಹಿತಾಸಕ್ತಿಯನ್ನು ಮೆರೆಸುವುದು ಎಂದಿಗಿಂತ ಇಂದು ಅತ್ಯಗತ್ಯವೆನಿಸಿದೆ. ಇದಕ್ಕಾಗಿ, ನಗರ-ಹಳ್ಳಿಗಳಲ್ಲಿ ಗಲ್ಲಿಗಲ್ಲಿಗಳಲ್ಲಿ ಮೆರೆಯುತ್ತಿರುವ **ಈ ಹೆಂಡದಂಗಡಿಗಳ ಪರವಾನಗಿ (ಲೈಸೆನ್ಸ್)ಗಳನ್ನು ರದ್ದುಪಡಿಸಿ ಅವುಗಳ ಮುಟ್ಟುಗೋಲು ಹಾಕಬೇಕಾಗಿದೆ.** ಅಲ್ಲದೆ ಕುಡಿತದ ದುಷ್ಪರಿಣಾಮಗಳನ್ನು ಬಡಜನರಿಗೆ ಮನವರಿಕೆ ಮಾಡಿಕೊಡುವ ಜನಪರ ಕಾರ್ಯಕ್ರಮವನ್ನು ಹಾಕಿಕೊಳ್ಳುವ ಮೂಲಕ ತನ್ನ ಸಾಮಾಜಿಕ ಕಾಳಜಿಯನ್ನು ಮೆರೆಸಿ ಸಾಗಬೇಕಾಗಿದೆ. ರಾಜ್ಯದಲ್ಲಿ ತಕ್ಷಣವೇ ಸಂಪೂರ್ಣ ಪಾನ ನಿರೋಧವನ್ನು ಜಾರಿಗೆ ತರಬೇಕೆಂದು ಈ ಮೂಲಕ ತಮ್ಮಲ್ಲಿ ಒತ್ತಾಯಪೂರ್ವಕ ವಿನಂತಿಸಿಕೊಳ್ಳುತ್ತೇವೆ.

ವಂದನೆಗಳೊಂದಿಗೆ

REGD NO. KRNA 271

## ಮಾನಸ

ಮಹಿಳೆಯರ ಮೇಲೆ ನಡೆಯುವ ಅಮಾನವೀಯ ದೌರ್ಜನ್ಯ ಹಿಂಸೆಗಳನ್ನು ಬೆಳಕಿಗೆ ತರುವುದಕ್ಕಾಗಿ.

ಶೋಷಿತ ವ್ಯವಸ್ಥೆಯನ್ನು, ಅದರ ವಿವಿಧ ರೂಪಗಳನ್ನು ಗುರುತಿಸುವುದಕ್ಕಾಗಿ

ಮಹಿಳೆಯರೊಂದಿಗೆ ಆತ್ಮೀಯ ಅರ್ಥಪೂರ್ಣ ಸಂವಾದಕ್ಕಾಗಿ

ಮಹಿಳಾ ಆಂದೋಲನದ ಹೊಸ ದಿಕ್ಕುಗಳ ಹುಡುಕಾಟಕ್ಕಾಗಿ

ವಿಳಾಸ :

" ಮಾನಸ "
ಪಂಚಾಯಿತಿ ರಸ್ತೆ
ಕಾಡುಗೋಡಿ
ಬೆಂಗಳೂರು-560 067